ಸಮಾಜ ಪುಸ್ತಕಮಾಲೆ, ಧಾರವಾಡ.

# ಕಾಮದಹನದ ಭ್ರಾಂತಿ!



"ಡಾ|| ವನವಿಹಾರಿ"



(ಪ್ರಥಮಾವೃತ್ತಿ)

ಜುಲೈ ೧೯೪೧  ಬೆಲೆ ೧೨ ಆಣೆ

# ಅನುಕ್ರಮಣಿಕೆ



ನಮ್ಮ ಜೀವನದಲ್ಲಿ ಅತಿಶಯ ಸ್ವಾರಸ್ಯವಾದ ವಿಷಯವೇ ಕಾಮ, ಗಂಡು ಹೆಣ್ಣುಗಳ ಅಗಾಧ ಪ್ರೇಮದ ಧಾಮವೀ ಕಾಮ; ಜೀವ ಜಾತಿಯನ್ನು ಅಮರವಾಗಿ ಸುವ ಅಮೃತವೀ ಕಾಮ. ಇಂತಹ ಬಲೆ ಬಾಳುವ ಕಾಮವೆಂದರೇನು ? ಅದರ ಸ್ವರೂಪ ವೆಂತಹದು ? ಅದನ್ನು ಅನುಭವಿಸಿ ಆನಂದಿಸುವದೆಂತು ? ಇತ್ಯಾದಿ ಜ್ಞಾನಕ್ಕೆ ಸಮಾಜ ವನ್ನು ಪರಂಪರಾಗತವಾದ ನೈತಿಕ ಕಲ್ಪನೆಗಳು, ತಿರಸ್ಕಾರ ಲಜ್ಜೆಗಳು ಎರವು ಮಾಡಿದ್ದವು. ಆದರೆ ಈ ಹಳೆಯ ರೂಢಿಗಳಲ್ಲಿ ಸಿಲುಕಿಕೊಂಡಿದ್ದ ಜನರು, ವಿಶೇಷತಃ ತರುಣ ತರುಣಿಯರು ಈ ಕಾಮಜ್ಞಾನಾಮೃತವನ್ನು ಸವಿಯಬೇಕೆಂದು ಒಳಗೊಳಗೇ ಬಹಳವಾಗಿ ಚಡಪಡಿಸುತ್ತಿದ್ದರು ನಮ್ಮ ಸಮಾಜ ಪುಸ್ತಕ ಮಾಲೆಯು ಈ ವಿಷ ಯದ ಸಂಪೂರ್ಣ ಜ್ಞಾನವನ್ನು, ನೈತಿಕ ರೂಢಿಗಳೆಂಬ ಸೆರೆಮನೆಯಿಂದ ಬಿಡಿಸಿ ತಂದು ಜನರಿಗೆಲ್ಲಾ ಹಂಚಲು ಧೈರ್ಯ ಮಾಡಿತು. ಈ ವರೆಗೆ ಪ್ರೇಮಕಲೆ, ಪೌರುಷ ಎಂಬರಡು ಡಾ ಗೋಪಾಲಕೃಷ್ಣರಾಯರ ಪುಸ್ತಕಗಳನ್ನು ಪ್ರಕಟಿಸಿರುವದು. ಇಂತಹ ವಿಷಯಗಳನ್ನು ಬಹಿರಂಗ ಪಡಿಸುವದಕ್ಕೆ ಅನೇಕ ವಿಪತ್ತುಗಳು ಬಂದರೂ ಅವನ್ನೆದು ರಿಸಿ, ಈಗ ಈ ' ಕಾಮದಹನದ ಭ್ರಾಂತಿ, ಎಂಬ ಪುಸ್ತಕವನ್ನು ಪ್ರಸಿದ್ಧಿಸಿರುವೆವು.

ನಿವೃತ್ತಿಮಾರ್ಗ ಪ್ರಧಾನವಾದ ನಮ್ಮ ಧರ್ಮಗಳ ಕಲ್ಪನೆಯಲ್ಲಿ ' ಕಾಮ ತೃಪ್ತಿಯು ವಿಷಯ ಲೋಲುಪತೆಯೆಂಬ ಹೆಸರು ಪಡೆದಿರುವದಲ್ಲದೆ, ಅದು ನಮ್ಮ ಮೋಕ್ಷಕ್ಕೆ ವಿಘಾತಕವಾದುದೆಂದು ಪ್ರಶಂಸಿತವಾಗಿದೆ. ಕಾಮವನ್ನು ನಿಯಂತ್ರಿಸಿವಷ್ಟೂ ಒಳ್ಳೆಯದು, ನಿಯಂತ್ರಿಸಿ, ನಿಯಂತ್ರಿಸಿ ಅದನ್ನು ಸುಟ್ಟುಹಾಕಬೇಕು ಎಂಬ ಪ್ರವೃತ್ತಿ ಯನ್ನೇ ನಮ್ಮ ಧರ್ಮಗಳು ಹುಟ್ಟಿಸುತ್ತಿವೆ. ಆದರಿದು ಸೃಷ್ಟಿನಿಯಮಕ್ಕೆ ವಿಸಂಗತ ವಾದದ್ದು. ಆದುದರಿಂದ ಕಾಮವು ಸುಟ್ಟರೆ ಸುಡುವುದಲ್ಲ; ಸುಡುವದರಲ್ಲಿ ಸುಖವಿಲ್ಲ; ನಿಸರ್ಗವನ್ನು ಎದುರಿಸಿ ಯಾವ ಧರ್ಮವು ಗೆಲ್ಲಬಹುದು ? ಕಾಮಕ್ಕೆ ನಿಯಂತ್ರಣವನ್ನು ಹಾಕಿದಷ್ಟೂ ಸಮಾಜವು ಅಡ್ಡ ದಾರಿಗೆ ಬಿದ್ದು ಕೆಡತೊಡಗಿದೆ. ಈ ಕಾಮದಹನದ ಭ್ರಾಂತಿಯಿಂದ ಜಗತ್ತಿನಲ್ಲಿ ಯಾವ ಯಾವ ಅತ್ಯಾಚಾರ ಅನಾಚಾರಗಳು ಉಂಟಾಗಿವೆ ? ಅಶಾಂತಿ ಅಸುಖಗಳು ಸಮಾಜವನ್ನು ನಿರಾಶೆಯಿಂದ ಹೇಗೆ ನಿರ್ಜೀವಗೊಳಿಸಿವೆ ? ಇವುಗಳ ನಿವಾರಣೆಗೆ ಏನು ಮಾಡಬೇಕು ? ಇಹಲೋಕವನ್ನು ಸುಖಮಯವಾಗಿ ಮಾಡುವುದೆಂತು ? ತರುಣ ತರುಣಿಯರ ಜೀವನವನ್ನು ಉತ್ಸಾಹ ಉಲ್ಲಾಸ ಭರಿತವಾಗಿ ಮಾಡುವ ಹಾದಿಯಾವುದು ? ಇತ್ಯಾದಿ ವಿಷಯಗಳನ್ನು ಡಾ. ವನವಿಹಾರಿಯವರು ಈ ಪುಸ್ತಕದಲ್ಲಿ ಅತ್ಯಂತ ಮಾರ್ಮಿಕವಾಗಿ ವಿವೇಚಿಸಿದ್ದಾರೆ. ಇದಕ್ಕಾಗಿ ಡಾ. ವನವಿಹಾರಿ ಯವರಿಗೆ ತುಂಬಾ ಕೃತಜ್ಞರಾಗಿದ್ದೇವೆ.

ಧಾರವಾಡ. ಭಾಲಚಂದ್ರ ಘಾಣೇಕರ

೧೪—೭—೧೯೪೧ ಪ್ರಕಾಶಕ.

*

# ಕಾಮದಹನದ ಭ್ರಾಂತಿ!



**" ಸಮಾಜದ ಬೇನೆಗಳು ಬಿಚ್ಚುಮಾತಿನಿಂದ ಹೇಳಿದಲ್ಲದೆ ನೆಟ್ಟಗಾಗುವದಿಲ್ಲ.**

ಜಾನ್ ಸ್ಟುಅರ್ಟ ಮಿಲ್

## ಆತ್ಮವಿಕಾಸಕ್ಕಾಗಿ ದೇಹವಿನಾಶ!

ಈಗಿನ ಕಾಲದಲ್ಲಿ ಮನುಷ್ಯನು ಹೆಚ್ಚಾಗಿ ದುಃಖಿಯಾಗಿರುವದು ಏಕೆ? ಅವನು ದೇಹಕ್ಕೆ ಸಲ್ಲಬೇಕಾದ ಗೌರವವನ್ನೇ ಸಲ್ಲಿಸುತ್ತಿಲ್ಲ ಸುಶಿಕ್ಷಿತರು ಮೊದಲುಗೊಂಡು ಇಡೀ ಸಮಾಜವೇ ದೇಹದ ರಚನೆಯ ಬಗ್ಗೆಯೂ ಅದರ ಗುಣಧರ್ಮಗಳ ಬಗ್ಗೆಯೂ ಜ್ಞಾನವಿಲ್ಲದೆ ಆಯುಷ್ಯವನ್ನು ನೂಕುತ್ತಿರುವದು. ಜನರು ತಮ್ಮ ದೇಹದ ಆರೋಗ್ಯ ಅನಾರೋಗ್ಯಗಳ ಸಂಬಂಧವಾದ ವಿಚಾರಗಳನ್ನೆಲ್ಲಾ ಡಾಕ್ಟರರು, ವೈದ್ಯರು, ಹಕೀಮರು, ದೇವರು, ದೆವ್ವ, ದೈವ ಇವರಿಗೇ ಒಪ್ಪಿಸಿ ಬಿಟ್ಟಿದ್ದಾರೆ; ಅವರು ಈ ವಿಷಯದಲ್ಲಿ ಕೈ ಹಾಕಲಿಕ್ಕೇ ಒಲ್ಲರು. ಈಗಿನ ಶಿಕ್ಷಣಕ್ರಮದಲ್ಲಿ ಯಾದರೂ ದೇಹಧರ್ಮದ ಬಗ್ಗೆಯಾಗಲಿ, ಅದರರಚನೆಯ ಬಗ್ಗೆಯಾಗಲಿ, ಮುಂದೆ ಹೇಗೆ ನಡೆದುಕೊಳ್ಳಬೇಕೆಂಬ ಬಗ್ಗೆಯಾಗಲಿ ಸಂಪೂರ್ಣ ಜ್ಞಾನಮಾಡಿಕೊಡುವ ಏರ್ಪಾಟವಿಲ್ಲ ದೇಹಧರ್ಮದ ಬಗ್ಗೆ ಸಹಾನುಭೂತಿಯನ್ನು ಹುಟ್ಟಿಸುವದು, ದೇಹವನ್ನು ಸೊಗಸಾಗಿ ಬೆಳೆಯಿಸಬೇಕೆಂಬ ಹಂಬಲವನ್ನು ಉತ್ಪನ್ನಮಾಡುವದು, ಸೌಂದರ್ಯದ ಸ್ವಾರಸ್ಯವನ್ನು ಹೀರಿ ಶಾಶ್ವತ ಆನಂದವನ್ನು ನಿಜವಾದ ಘನತೆಯನ್ನು ಗಳಿಸುವ ಹಾದಿಯನ್ನು ತೋರುವ ಮಾತುದೂರವೇ ಉಳಿಯಿತು. ಇಷ್ಟೇ ಅಲ್ಲ; ಇದಕ್ಕೆ ವಿಪರೀತವಾಗಿ, ಇಂತಹ ವಿಷಯಗಳು ನರಕಕ್ಕೆ ತಳ್ಳುವವು, ಇವುಗಳಲ್ಲಿ ಅನುರಕ್ತವಾಗುವುದು ಮಹಾಪಾಪ ಎಂಬ ಅಡ್ಡದಾರಿಗೊಯ್ಯುವ ತಪ್ಪು ಕಲ್ಪನೆಗಳನ್ನೇ ತರುಣರಲ್ಲಿ ತುಂಬಲಾಗುತ್ತಿದೆ. ಆಟ

ನೋಟಗಳಲ್ಲಿಯ ಅಭಿರುಚಿಯನ್ನು ಮಾತ್ರವಲ್ಲ ದೇಹದ ಸ್ವಾಸ್ಥ್ಯವನ್ನೂ ತಿರಸ್ಕರಿಸಲಾಗುತ್ತಿದೆ; ಅವುಗಳನ್ನುಳ್ಳ ಜನರನ್ನು ಉಚ್ಚಶ್ರೇಣಿಯವರಲ್ಲವೆಂದು ಹೀಯಾಳಿಸುವುದೂ ಉಂಟು. ದೇಹದಾರ್ಢ್ಯವೂ ಒಂದು ಸದ್ಗುಣವೆಂದು ಅದನ್ನು ಬಾಳಿನಲ್ಲಿಯ ಗುರಿಯನ್ನಾಗಿಟ್ಟು ಕೊಳ್ಳಬೇಕೆಂದು ಯಾರಿಗೂ ಎನಿಸುವುದಿಲ್ಲ ಏಕೆಂದರೆ ಅದನ್ನು ಪಡೆದವರಿಗೆ ತಕ್ಕ ಮರ್ಯಾದೆಯೋ ಸಮಾಜದಲ್ಲಿಲ್ಲ ಅದರಲ್ಲಿಯೂ ಹೆಣ್ಮಕ್ಕಳ ದೇಹ ದಾರ್ಢ್ಯವಾಗಲಿ, ಸೌಂದರ್ಯವಾಗಲಿ, ಅಥವಾ ಸೌಂದರ್ಯೋಪಾಸನೆಯಾಗಲಿ ವ್ಯಭಿಚಾರದ ಲಕ್ಷಣಗಳೆಂದು ಭಾವಿಸಲಾಗುತ್ತಿದ. ಹೆಚ್ಚಾದರೆ ದಾರ್ಢ್ಯ ಸೌಂದರ್ಯಗಳು ದೇವರು ಅನುಗ್ರಹಿಸಿದ ಕಾಣಿಕೆಗಳೆಂದ್ಯು ಬಗೆಯುವರೇ ಹೊರತು, ಮನುಷ್ಯನು ಇವನ್ನು ಗಳಿಸಬಹುದೆಂದು ಎನಿಸುವುದಿಲ್ಲ. ಎಂದರೆ ದೇಹಧರ್ಮದ ಅರಿವು ಕಡಿಮೆಯಿರುವಂತೆ ಅದರ ವಿಷಯದಲ್ಲಿ ಅನಾದರವೂ ಹೆಚ್ಚಾಗಿದೆ ಆದುದರಿಂದ ನೈತಿಕ ಅಥವಾ ಧಾರ್ಮಿಕ ಕಟ್ಟಳೆಗಳನ್ನು ಮುರಿದವರು ಅಪರಾಧಿಗಳು, ಕಠಿಣ ಶಿಕ್ಷೆಗೆ ಪಾತ್ರರು, ಆದರೆ ದೇಹ ಧರ್ಮವನ್ನುಲ್ಲಂಘಿಸಿ ರೋಗಗ್ರಸ್ತರಾದವರು ಅಪರಾಧಿಗಳಲ್ಲ, ಬಹಳವಾದರ ದುರ್ದೈವಿಗಳು ಎಂಬ ಭಾವನೆ ಸಮಾಜದಲ್ಲಿ ಬೇರೂರಿದೆ. ದೇಹಧರ್ಮಗಳು ಅಥವಾ ವಿಕಾರಗಳು ತೀರಾ ಹೇಯಕರ; ತರುಣರು ಅವುಗಳನ್ನು ಹತ್ತಿಕ್ಕಬೇಕೆಂದು ಎಚ್ಚರಿಕೆ ಕೊಡುವದು ವಾಡಿಕೆಯಾಗಿದೆ. ನೈತಿಕ ಅಥವಾ ಬೌದ್ಧಿಕ ಶಕ್ತಿಗಳನ್ನು ಮಾತ್ರ ಬೆಳೆಯಿಸಲು ಉತ್ತೇಜನವುಂಟು. ವಿಕಾರಗಳನ್ನು ಮೆಟ್ಟಿ ಸಂಯಮಿಯಾಗುವದೇ ಮಾನವನ ಶ್ರೇಷ್ಠವಾದ ಕರ್ತವ್ಯವೆಂದು ಎಣಿಸಲ್ಪಟ್ಟಿದೆ. ಹೆಚ್ಚೇಕೆ, ಜೀವನಕ್ಕಿಂತ ಮರಣವೇ ಶ್ರೇಯಸ್ಕರವಾದುದೆಂದು ಕೆಲವು ತತ್ತ್ವಜ್ಞಾನಿಗಳು ಭಾವಿಸುವರು. ಅವರ ಅಭಿಪ್ರಾಯದಲ್ಲಿ, ದೀರ್ಘಾಯುಷ್ಯವು, ಕ್ರಮೇಣ ಮುಪ್ಪಾಗಿ ಲಿಂಗೈಕ್ಯವಾಗುವದು ಎಂದೂ ಸ್ವತಂತ್ರವಾದ ಗುರಿಯಾಗಲಾರದು. ತಪ್ಪು ಸಂಸ್ಕಾರದಿಂದ, ತಪ್ಪು ಶಿಕ್ಷಣದಿಂದ ಬೆಳೆದ ಅವರ ಮನಸು ದೀರ್ಘಾಯುಷ್ಯವನ್ನು, ಕ್ರಮೇಣ ಉಂಟಾಗುವ ಸ್ವಾಭಾವಿಕವಾದ ಮುಪ್ಪನ್ನು ಹೊಂದಿ ಸಾಯುವದನ್ನು ಹೀಯಾಳಿಸುವದು. ನೈಸರ್ಗಿಕವಾದ ದೇಹಧರ್ಮದ ಕಟ್ಟಳೆಗಳನ್ನು ಮೀರಿದ ತಪ್ಪಿನ ಶಿಕ್ಷಾ

ರೂಪದಿಂದ ಒದಗುವ ಅಕಾಲ ಮೃತ್ಯುವನ್ನು ಅಥವಾ ಸಾಹಸಿಗರ ಶೋಚನೀಯ ವೀರಮರಣವನ್ನು ಅಭಿನಂದಿಸಲಾಗುತ್ತಿದೆ. ಸ್ತ್ರೀಯರು ಬೇಗ ಸತ್ತಷ್ಟೂ ಒಳ್ಳೆಯದೆಂದು ಜನರೂ ಎಣಿಸುವರು, ಅವಳೂ ಭಾವಿಸುವಳು.

ಭೌತಿಕ ಶಾಸ್ತ್ರಗಳು ಎಷ್ಟೇ ಅದ್ಭುತ ಚಮತ್ಕಾರಗಳಿಂದ ಕೂಡಿರಲೊಲ್ಲವೇಕೆ, ಎಷ್ಟೇ ನಾವೀನ್ಯಪೂರ್ಣ ವಿರಲೊಲ್ಲವೇಕೆ, ಜನರ ದೃಷ್ಟಿಯಲ್ಲಿ ಅವುಗಳಿಗೂ ಅವುಗಳ ಉಪಾಸಕರಾದ ಶಾಸ್ತ್ರಜ್ಞರಿಗೂ ಬೆಲೆ ಕಡಿಮೆಯೇ. ಆದರೆ ಮಾನಸಿಕ, ನೈತಿಕ, ಆಧ್ಯಾತ್ಮಿಕ, ಧಾರ್ಮಿಕ ವಿಷಯಗಳ ತಜ್ಞರಿಗೆ ಮಿತಿ ಮೀರಿ ಬೆಲೆ ಕೊಡುವರು; ಇವರಿಗೇ ಜನರಲ್ಲಿ ಆದರ ಹೆಚ್ಚು. ಹೀಗೆ ನಮ್ಮ ಜನರು ಇಹವನ್ನು ಅಲ್ಲಗಳೆದು ಪರವನ್ನು ಬೆನ್ನುಹತ್ತುವರು. ಲಲಿತಕಲೆ, ಚಿತ್ರಕಲೆ, ಶಿಲ್ಪಕಲ, ಮೊದಲಾದವು ಕೂಡ ಐಹಿಕವಿಷಯುಗಳೆಂದು—ಅವು ಎಷ್ಟು ಉತ್ತಮ ಪರಿಣಾಮಕಾರಿಗಳಾಗಿದ್ದರೂ—ಜನಾದರಕ್ಕೆ ಹೊರತಾಗಿರುವವು.

ಹೀಗೆ ಯಾವ ದೃಷ್ಟಿಯಿಂದ ನೋಡಿದರೂ ಈ ದೇಹವೂ ಭೌತಿಕ ವಸ್ತುಗಳೂ ಮನುಷ್ಯನ ಅನಾದರಕ್ಕೆ ಪಾತ್ರವಾಗಿವೆ. ಕೇವಲ ವ್ಯವಹಾರಿಕ ದೃಷ್ಟಿಯುಳ್ಳ ಕೆಲ ಜನರ ಹೊರತು, ಇಡಿಯ ಮಾನವ ಜಾತಿಯು ತೀರ ಭಿನ್ನ ದೃಷ್ಟಿಂದಲೇ ವಿಚಾರಮಾಡುತ್ತ ಬೆಳೆಯುವದು, ಬಾಳುವದು, ಕೊನೆಗೆ ಅಳಿಯುವದು. ಬಹು ಜನರಿಗೆ ಅಂಟಿ ಕೊಂಡಿರುವುದು ದೇಹದ ವಿಚಾರವಲ್ಲ, ಮನಸಿಕ ವಿಚಾರ; ಭೌತಿಕ ತತ್ತ್ವಗಳಲ್ಲ, ನೈತಿಕ ಮತ್ತು ಬೌದ್ಧಿಕ ವಿಚಾರಗಳು.

ಅವರು ಅನ್ನುವದೇನಂದರೆ, "ಪ್ರಕೃತಿಗಿಂತಲೂ ಆತ್ಮವೇ ಶ್ರೇಷ್ಠವಾದದ್ದು, ಪವಿತ್ರವಾದದ್ದು. ಆತ್ಮವೇ ನಿಜವಾಗಿ ಮಾನವ ಜಾತಿಯ ಉತ್ತಮಾಂಗವಾಗಿರುವುದು. ಮನುಷ್ಯನು ಮಿಕ್ಕ ವಿಶ್ವಕ್ಕಿಂತಲೂ ಮಿಗಿಲಾದವನೆನಿಸಿದ್ದೂ ದೇವತ್ವವನ್ನು ಪಡೆಯುವುದೂ ಇದರಿಂದಲೇ! ಇಂತಹ ಆತ್ಮದೊಂದಿಗೆ ಅದರ ಜೊತೆಗಾರನಾದ ದೇಹವನ್ನು ಹೋಲಿಸಿ ನೋಡಿದರೆ, ಈ ದೇಹವು ಎಷ್ಟು ಕೀಳಾಗಿರುವದು! ಅದರ ವ್ಯವಹಾರಗಳು ಎಷ್ಟು ಕಾಡು, ಎಷ್ಟು ಹೊಲಸು; ಅವುಗಳಿಂದ ಆತ್ಮದ ವಿಕಾಸಕ್ಕೆ ಎಷ್ಟು

ಆತಂಕ! ದೇಹವೂ ಅದರೆಲ್ಲ ವೈಭವಗಳೂ ಬೇಗನೆ ನಷ್ಟವಾದಷ್ಟು ಆನಂದದಿಂದ ಆತ್ಮವು ಈ ಮೈಯೆಂಬ ಸೆರೆಮನೆಯಿಂದ ಮುಕ್ತವಾಗುವದು; ಒಂದೇಸವನೆ ವಿಕಾಸಹೊಂದುತ್ತ ಹೋಗಿ ಚಿರವಾದ ಪರಮಾನಂದದಲ್ಲಿ ಲೀನಲಾಗುವದು. ಎಂದ ಮೇಲೆ "ಕವಡೀ ಕವಡೀ ಮಾಯಾ ಜೋಡೀ ಏಕದಿನ ಮುಟ್ಟೀನೇ ಮಿಲಜಾಯ" ಎಂಬಂತೆ ಈ ನಶ್ವರವಾದ ಐಶ್ವರ್ಯದ ಬೆನ್ನಹತ್ತುವದರಲ್ಲಿ ಕಾಲವನ್ನು ವ್ಯರ್ಥವಾಗಿ ಏಕೆ ಕಳೆಯಬೇಕು? ಈ ಕ್ಷಣಭಂಗುರವಾದ ದೇಹದ ವಿಚಾರವನ್ನು ಬಿಟ್ಟು ಕೊಟ್ಟು, ಕೇವಲ ಪರಿಪೂರ್ಣವಾದಂತಹ ಆತ್ಮದ ಚಿಂತನೆಯಲ್ಲಿ ಆಯುಷ್ಯವನ್ನು ವೆಚ್ಚಮಾಡುವದು ಲೇಸು."

ಈ ತೆರನಾದ ವಿಚಾರಸರಣಿಯ ತಿರುಗಣಿಮಡುವಿನಲ್ಲಿ ಜನರು ಸಿಕ್ಕುಬಿದ್ದುದರಿಂದ ಅವರ ಆಶೆ, ಆಕಾಂಕ್ಷೆ, ಸಹಾನುಭೂತಿಗಳೆಲ್ಲವೂ ಆಧ್ಯಾತ್ಮಿಕ ಕಲ್ಯಾಣ ದೊಡನೆಯೆ ತೊಡಕಿಕೊಂಡಿರುವವು; ಮತ್ತು ಅವರು ತಮ್ಮಂತೆಯೆ ಮಿಕ್ಕೆಲ್ಲರದೆಂದು ನಿರ್ಣಯಿಸುವರು. ಒಳ್ಳೇ ತೆರನಾಗಿ ಕಳೆದ ಅವರ ನೈತಿಕ ಆಯುಷ್ಯವೂ ಮಿಕ್ಕವರ ಆಧ್ಯಾತ್ಮಿಕ ವಿಕಾಸಕ್ಕಾಗಿ ಅವರು ಮಾಡುವ ಪ್ರಯತ್ನಗಳೂ ಜನರ ಹಾರ್ದಿಕ ಸಹಾನು ಭೂತಿಯನ್ನು ಸೆಳೆದು ಕೊಳ್ಳುವವು. ಆದರೆ ಒಳ್ಳೆಯ ತೆರನಾದ ದೇಹದ ಸುಸ್ಥಿತಿಯ ಪರಿವೆಯು ಅವರಿಗಿರುವದಿಲ್ಲ ಮತ್ತು ಉಳಿದವರ ದೇಹಸ್ವಾಸ್ಥ್ಯದ ಸಲುವಾಗಿ ಅವರು ಮಾಡುವ ಪ್ರಯತ್ನಗಳಿಗೆ ಆಧ್ಯಾತ್ಮಿಕರ ದೃಷ್ಟಿಯಲ್ಲಿ ಕಿಂಚಿತ್ತಾದರೂ ಬೆಲೆಯಿರುವದಿಲ್ಲ. ಕವಿಗಳ, ನೀತಿಶಾಸ್ತ್ರಜ್ಞರ, ತತ್ತ್ವಜ್ಞಾನಿಗಳ ಹೆಸರುಗಳು ಪ್ರತಿಯೊಬ್ಬರ ಬಾಯಲ್ಲಿರುವವು. ಆದರೆ ದೇಹಸ್ವಾಸ್ಥ್ಯಕ್ಕಾಗಿ, ವಿಕಾಸಕ್ಕಾಗಿ ಹೆಣಗುವವರ ಹೆಸರು ಸಹ ಜನರಿಗೆ ಗೊತ್ತಿರುವದಿಲ್ಲ. ಅವರ ಕೃತಿಗಳಂತೂ ಎಲ್ಲಿಯೋ ಏನೋ! ದೇಹದ ರೋಗಗಳನ್ನು ಹೋಗಲಾಡಿಸಿ ಸ್ವಾಸ್ಥ್ಯವನ್ನು ಒದಗಿಸಿಕೊಡುವ ವೈದ್ಯರು, ಪದಾರ್ಥವಿಜ್ಞಾನ ಇಂದ್ರಿಯ ವಿಜ್ಞಾನ ತಜ್ಞರು ಇವರಿಗಿಂತ ಆಧ್ಯಾತ್ಮಿಕ ರೋಗಗಳನ್ನು ಹೋಗಲಾಡಿಸುವವರೆಂದು ಹೊಗಳಿಸಿಕೊಳ್ಳುವಂಥ ಧರ್ಮಗುರುಗಳ ಬೆಲೆಯು ಜನರ ದೃಷ್ಟಿಯಿಂದ ಹೆಚ್ಚು. ಹೀಗೆಯೇ ಅಧ್ಯಾತ್ಮದ ಹೊರತು ಎಲ್ಲ ವ್ಯಾವಹಾರಿಕ ವಿಷಯಗಳ ಬೆಲೆಯೂದರೂ ಕಡಿಮೆ.

ಈ ಬಗೆಯ ಅಪಪ್ರಚಾರವಾಗಲು ವಿವಿಧ ಧರ್ಮಗಳೇ ಕಾರಣ ಎಂದು ಹೇಳಬಹುದು. 'ಪರಮಾತ್ಮನಿಂದಲೇ ಜಗತ್ತು ಹುಟ್ಟಿತು, ಅವನೇ ಅದನ್ನು ಸಾಗಿಸುವನು ಇಲ್ಲವೆ ಮನಬಂದಂತೆ ಮುರಿಯುವನು. ಏನೋ ಒಂದು ಚಮತ್ಕಾರದಿಂದ ಜನನಕಾಲದಲ್ಲಿ ಆತ್ಮದೇಹಗಳ ಸಂಯೋಗ ವಾಗುವದು. ಈ ಶರೀರವು ಬಿದ್ದುಹೋದ ಮೇಲೆ ಶಾಶ್ವತವಾದ ಆತ್ಮವು ಪರಮಾತ್ಮನಲ್ಲಿ ಐಕ್ಯವಾಗುವದು. ಆದುದರಿಂದ ಆತ್ಮವು ಶ್ರೇಷ್ಠ; ಕಾರ್ಯವು ಕನಿಷ್ಟ. ಆದುದರಿಂದಲೇ ಭೌತಿಕಶಾಸ್ತ್ರಕ್ಕಿಂತ ಅಧ್ಯಾತ್ಮ ಶಾಸ್ತ್ರವು ಶ್ರೇಷ್ಠವಾದದ್ದು' ಎಂಬ ಭಾವನೆಯು ಈ ಧರ್ಮಗಳಿಂದ ಜನರಲ್ಲಿ ನೆಲೆಗೊಂಡಿತು. ಇದರಿಂದ ಅಧ್ಯಾತ್ಮದ ಉಪಾಸಕರಾದ ಧರ್ಮ ಗುರುಗಳ ಗೌರವವು ಹೆಚ್ಚಿತು ಅವರು ತಮ್ಮ ವರ್ಚಸ್ಸನ್ನು ಕಾಯ್ದು ಕೊಳ್ಳಲಿಕ್ಕೆ ವಿವಿಧ ಕಾಯಕಗಳನ್ನು ಕೈಕೊಂಡರು. ಜನರು ವಿಶೇಷವಾಗಿ ಹೆಣ್ಣುಮಕ್ಕಳು ಅಜ್ಞಾನದಲ್ಲಿಯೇ ಇರುವಂತೆ--ಕಟ್ಟಳೆಗಳನ್ನು ಕಟ್ಟಿದರು. ಅಧ್ಯಾತ್ಮವು ಪ್ರತ್ಯಕ್ಷ ಶಾಸ್ತ್ರವಲ್ಲದ್ದರಿಂದ ಅದರ ಸುತ್ತಲೂ ಗೂಢಶಕ್ತಿಯ ಆವರಣವನ್ನು ಹೊಚ್ಚಿದರು. ಬಗೆಬಗೆಯ ಕೈವಾಡಗಳಿಂದ ಗಾರುಡಿಗ ರಂತೆ--ಚಮತ್ಕಾರಗಳನ್ನು ಮಾಡಿ ತೋರಿಸಿ, ಸಾಮಾನ್ಯ ಜನತೆಯನ್ನು ಮಂಕುಗೊಳಿಸಿ, ಪರಂಪರಾಗತವಾದ ರೂಢಿ ಮತ್ತು ವಿಚಾರಗಳ ದಾಸ್ಯಕ್ಕೆ ಗುರಿಮಾಡಿದರು. ಜನರ ಸ್ವತಂತ್ರ ವಿಚಾರ ಶಕ್ತಿಯೇ ನಷ್ಟವಾಯಿತು. ಬರುಬರುತ್ತ ಧರ್ಮಗುರುಗಳ ಸ್ವತಂತ್ರ ವಿಚಾರ ಶಕ್ತಿ ಲುಪ್ತವಾಗಿ ಎಲ್ಲರೂ ಪರಂಪರೆಯ ಅಂಧದಾಸರಾದರು.

ನೈಸರ್ಗಿಕ ಧರ್ಮವು ಧಾರ್ಮಿಕ ಅಥವಾ ಆಧ್ಯಾತ್ಮಿಕ ನಂಬಿಕೆ ಗಳಿಗೆ ತೀರವಿರುದ್ಧವಾಗಿರುವದು. ಈ ನಂಬಿಕೆಗಳು ದೇಹಕ್ಕಿಂತ ಮನಸ್ಸೇ ಹೆಚ್ಚೆಂದು ಎಣಿಸುವವು. ಸಮಾಜದಲ್ಲಿ ನೈಸರ್ಗಿಕ ಧರ್ಮಕ್ಕೆ ಯೋಗ್ಯ ಸ್ಥಾನವನ್ನು ಕೊಡುವದಿಲ್ಲ; ಆದರೆ ಇದಕ್ಕೆ ನೈಸರ್ಗಿಕಧರ್ಮವು ಸೊಪ್ಪು ಹಾಕುವದಿಲ್ಲ. ಅದರ ಮೂಲಭೂತ ಸಿದ್ಧಾಂತಗಳಾವವೆಂದರೆ--ಪರ ದಷ್ಟೇ ಇಹವೂ ಆತ್ಮದಷ್ಟೇ ದೇಹವೂ ಮಹತ್ತ್ವದವಾಗಿವೆ; ಒಂದರಿಂದ ಒಂದನ್ನು ವಿಂಗಡಿಸುವದೆಂದರೆ ಸೃಷ್ಟಿಧರ್ಮದ ನಿಜತ್ವವನ್ನು ನಷ್ಟಮಾಡಿ

ದಂತೆಯೇ ಸರಿ. ಒಂದನ್ನು ಮೇಲೇರಿಸಿ ಒಂದನ್ನು ತಳಗಾಣಿಸುವದೆಂದರೆ, ಎಲ್ಲಿ ಎಲ್ಲವಸ್ತುಗಳ ಬೆಲೆಯು ಸರಿಯಾಗಿರುವದೋ ಎಲ್ಲಿ ಒಂದು ವಸ್ತುವಿನ ಗುಣಧರ್ಮಗಳು ಮತ್ತೊಂದರ ಗುಣಧರ್ಮಗಳಿಗೆ ಎಂದೂ ನೊವ್ವುಹಾಕು ವದಿಲ್ಲವೋ ಅಂಥ ವಿಶ್ವದ ಸ್ವಾಸ್ಥ್ಯವನ್ನು ಭಂಗಗೊಳಿಸುವ ಭಯಂಕರ ಸಿದ್ಧಾಂತವೇ ಸರಿ.

ಸೃಷ್ಟಿಧರ್ಮವು ( physical religion ) ದೇವರೆಂಬ ಒಂದು ಶಕ್ತಿಯುಂಟು, ಅದು ಮೊದಲು ಮನಸನ್ನು ಹುಟ್ಟಿಸಿತು, ಮುಂದೆ ಈ ಮನಸು ತನ್ನ ಕಲ್ಪನಾ ಸೃಷ್ಟಿಯಿಂದ ಜಗತ್ತನ್ನು ನಿರ್ಮಿಸಿತು—ಎಂಬ ಸಿದ್ಧಾಂತವನ್ನು ಒಪ್ಪುವದಿಲ್ಲ. ಇದರಲ್ಲಿ ಅಧ್ಯಾತ್ಮವಾದಿಗಳು ಮನಸಿಗೂ ಮೆದುಳಿಗೂ ವಿಂಗಡಿಸಲು ಬಾರದಂತಹ ಸಂಬಂಧವುಂಟೆಂಬುದನ್ನೇ ಮರೆಯುತ್ತಾರೆ. ಆದ್ದರಿಂದ ಸೃಷ್ಟಿಕರ್ತನು ತೀರ ಭಿನ್ನನಾಗಿರುವನೆಂಬ ಸಿದ್ಧಾಂತವೇ ನಮ್ಮ ಅನುಭವಕ್ಕೆ ತೀರ ವಿರುದ್ಧವಾಗಿರುವದು; ಮನಸು ಮಿದುಳಿನೊಂದಿಗೆ ತೆರಪಿಲ್ಲದ ಸಂಬಂಧವುಳ್ಳದಾದ್ದರಿಂದ ಅದು ಪ್ರಕೃತಿ ಯನ್ನು ಹುಟ್ಟಿಸಲಾರದು.

ಸೃಷ್ಟಿಧರ್ಮವು ಪುರುಷನಿಂದ ಪ್ರಕೃತಿಯ ಉತ್ಪತ್ತಿ ಎಂಬ ತತ್ತ್ವ ವನ್ನು ಅಲ್ಲಗಳೆಯುತ್ತದೆ. ಹಾಗೆಯೇ ಸೃಷ್ಟಿಧರ್ಮಗಳು ಅಧ್ಯಾತ್ಮ ಧರ್ಮಗಳಿಗೆ ಆಧೀನವಾಗಿರಲಾರವು; ಒಂದರ ಅಧಿಕಾರವು ಮತ್ತೊಂದರ ಮೇಲೆ ಎಂದೂ ನಡೆಯಲಾರದು. ಒಂದನ್ನುಬಿಟ್ಟು ಒಂದು ಅಮರವೆಂಬು ದನ್ನು ಸೃಷ್ಟಿಧರ್ಮವು ನಿಷೇಧಿಸುವದು. ದೇಹ ನಿಕೃಷ್ಟ ಆತ್ಮಶ್ರೇಷ್ಠಎಂಬ ಭಾವನೆಯೆ ನಮ್ಮ ಅಶಾಂತಿಗೆ ಮೂಲವಾಗಿದೆ. ದೇಹವನ್ನು ಬಿಟ್ಟು ಅಥವಾ ದೇಹವನ್ನು ಕೊಂದು ಆತ್ಮವು ಮುಕ್ತಿಯನ್ನು ಪಡೆಯುವ ದೆಂಬ ಆಕುಂಚಿತ ಕಲ್ಪನೆಯೇ ಸೃಷ್ಟಿಧರ್ಮಕ್ಕೆ ಸಂಪೂರ್ಣ ವಿರುದ್ಧ ವಾಗಿದೆ. ಮನುಷ್ಯನ ಯಾವದೇ ಅಂಗವನ್ನು ಬಿಟ್ಟು ಮಾಡುವ ಮುಕ್ತಿಯ ಕಲ್ಪನೆಯನ್ನು ಅದು ತಿರಸ್ಕರಿಸುವದು. ನಮ್ಮ ಶಾರೀರಿಕ ಮಾನಸಿಕ ಸಂಬಂಧಗಳು ಬಿಡಿಸಲು ಬಾರದಷ್ಟು ಒಂದರೊಡನೊಂದು ಬೆರೆತಿವೆ. ನಮ್ಮ ಯಾವ ಅಂಗವೂ ಮಿಕ್ಕವುಗಳ ಕೂಡ ಸಹ ಕರಿಸದೆ ಏಳಲಾ ರದು, ಬೀಳಲಾರದು. ಆದ್ದರಿಂದ ದೈಹಿಕಪಾಪ-- ನೈತಿಕ ಪಾಪಗಳು ಅಭಿನ್ನಗಳು; ದೈಹಿಕ ಪಾಪವೂ ನೈತಿಕ ಪಾಪವೇ, ನೈತಿಕ

ಪಾಪವೂ ದೈಹಿಕಪಾಪವೇ. ರೋಗವು ಮನಸಿಗೆ ತಗಲಿದವಿನಾ ದೇಹಕ್ಕೆ, ದೇಹಕ್ಕೆಹತ್ತದ ವಿನಾ ಮನಸಿಗೆ ಅಂಟಲಾರದು.

ಮನೋಧರ್ಮಗಳ ಅಭ್ಯಾಸದಂತೆಯೇ ದೇಹಧರ್ಮಗಳ ಅಭ್ಯಾಸವೂ ಮಾನವ ಜೀವನಕ್ಕೆ ಅತ್ಯಗತ್ಯವಾದದ್ದೆಂದು ಇದರಿಂದ ಸ್ಪಷ್ಟವಾದಂತಾಯಿತು ತನ್ನ ಅಥವಾ ಇತರರ ದೇಹದ ಆರೋಗ್ಯ ಕರವಾದ ವಿಕಾಸಕ್ಕಾಗಿ ಮನುಷ್ಯನು ಸರಿಯಾಗಿ ಲಕ್ಷ್ಯಕೊಟ್ಟ ಹೊರತು, ದೇಹಕ್ಕೆ ತಕ್ಕ ಮನ್ನಣೆಯನ್ನು ಕೊಡುತ್ತಿರುವನೆಂದು ಹೇಳಲಾಗದು. ಮತ್ತು ಇಂಥವನು ಸೃಷ್ಟಿನಿಯಮಗಳನ್ನು ಉಲ್ಲಂಘಿಸುತ್ತ ಹೋಗಿ ದುಃಖಕ್ಕೆ ಈಡಾಗುಗುವನು ನಿಯಮಗಳ ಅಜ್ಞಾನವು ಅವುಗಳ ಉಲ್ಲಂಘನೆಯ ಅಪರಾಧದಿಂದ ಮುಕ್ತನಾಗಲು ನೆವವಾಗಲಾರದು. ನೈತಿಕಪಾಪಗಳು ಈ ತೆರದ ಅಜ್ಞಾನದ ಪರಿಣಾಮಗಳೆಂದು ಹೇಳಬಹುದು, ಆದರೆ ಸೃಷ್ಟಿಯು ಇಂಥನೆವಗಳನ್ನು ಕೇಳುವದಿಲ್ಲ. ನೈತಿಕ ವ್ಯವಹಾರದಷ್ಟೇ ದೈಹಿಕ ವ್ಯವಹಾರವಾದರೂ ಬಿಗಿಯಾಗಿರುವದು. ಒಳ್ಳೆಯ ನೈತಿಕ ವ್ಯವಹಾರವು ನಮ್ಮಸ್ತುತಿಗೆ ಅಥವಾ ಕೌತುಕಕ್ಕೆ ಅರ್ಹವಾಗಿರುವಂತೆ ಒಳ್ಳೆಯ ದೈಹಿಕ ವ್ಯವಹಾರವೂ ಅರ್ಹವೆಂದು ತಿಳಿಯಬೇಕು. ಮಿದುಳು ನಿರಾಮಯವಾಗಿರದೆ ಮನಸು ನಿರಾಮಯವಾಗಿರುವುದು ಶಕ್ಯವುಂಟೆ? ಇದು ಶಕ್ಯವಿದೆಯೆಂದು ಕೆಲವು ಅಧ್ಯಾತ್ಮವಾದಿಗಳೂ ನೀತಿವಂತರೂ ಜನರಲ್ಲಿ ತಪ್ಪುಕಲ್ಪನೆಯನ್ನುಂಟುಮಾಡಿರುವರು? ಆದರೆ ನಿಜವಾಗಿ ಇದು ಅಶಕ್ಯಕೋಟಿಯೊಳಗಿನ ಮಾತು. ಆದ್ದರಿಂದ ಮನುಷ್ಯನ ಸರಿಯಾದ ಏಳಿಗೆ ಅಥವಾ ವಿಕಾಸವೆಂದರೆ ಅವನ ದೇಹ-ಮನಸು ಗಳೆರಡರ ವಿಕಾಸವೇ ಎಂದು ನಿಃಸಂದೇಹವಾಗಿ ಹೇಳಬೇಕು, ಆದ್ದರಿಂದ ಇವೆರಡರ ವಿಕಾಸಕ್ಕೂ ಸಮನಾದ ಅವಕಾಶವನ್ನೊದಗಿಸಿಕೊಡುವದು ನಮ್ಮ ಶ್ರೇಯಸ್ಕರವಾದ ಕರ್ತವ್ಯವು.

ಕೇವಲ ಆಧ್ಯಾತ್ಮಿಕ ವಿಷಯಗಳ ಕಡೆಗೇ ಗಮನಕೊಡುವವರಿಗೆ, ನಿಜವಾಗಿ ಮನುಷ್ಯತ್ವವೆಂದರೇನೆಂಬುದೇ ಗೊತ್ತಿಲ್ಲ. ನಮ್ಮ ಪ್ರತಿಯೊಂದು ಆಚಾರ ವಿಚಾರಕ್ಕೂ ದೇಹಮನಗಳೆರಡರ ವ್ಯಾಪಾರಗಳೂ ಸಂಬಂಧಿಸಿರು

ವದರಿಂದ, ಒಂದಕ್ಕೆ ಹೆಚ್ಚು ಒಂದಕ್ಕೆ ಕಡಿಮೆ ಗಮನಕೊಡುವದು ಶುದ್ಧ ತಪ್ಪು. ಈ ತಪ್ಪನ್ನು ಮಾಡುವವರಿಗೆ ಇದರ ಪರಿಣಾಮದ ಬಗ್ಗೆ ತೀರ್ಮಾನ ಕೊಡುವ ಅಧಿಕಾರವಿರುವದಿಲ್ಲ. ನೈತಿಕ ಆಚಾರಗಳ ಫಲವನ್ನು ಹೇಳಲು ದ್ಯುಕ್ತರಾದ ನೀತಿಶಾಸ್ತ್ರಜ್ಞರೂ ಅನೈತಿಕ ಆಚಾರಕ್ಕೆ ದೇಹಧರ್ಮದ ಕಾರ್ಯಕಾರಣ ಸಂಬಂಧವೇನೆಂಬುದನ್ನು ಚೆನ್ನಾಗಿ ವಿಚಾರಿಸಲೇಬೇಕು. ಇಡೀ ಮಾನವೇತಿಹಾಸದಲ್ಲಿ, ಧಾರ್ಮಿಕರ ಅಥವಾ ನೀತಿವಿದರ ಮಾನವನನ್ನು ಕಾಣುವ ದೃಷ್ಟಿಬೇರೆ, ಪ್ರಕೃತಿವಿಮರ್ಶಕರ ಅಥವಾ ಶಾಸ್ತ್ರಜ್ಞರ ದೃಷ್ಟಿಬೇರೆ; ಮತ್ತು ಏಕಾಂಗವಾಗಿರುವಂತೆ ತೋರುವದು. ಆದ್ದರಿಂದ ಈ ಎರಡು ವರ್ಗದವರಿಗೂ ಮನುಷ್ಯನ ಸರಿಯಾದ ಜ್ಞಾನವಾಗಿರುವದಿಲ್ಲ. ಧಾರ್ಮಿಕರ ಮತ್ತು ಶಾಸ್ತ್ರಜ್ಞರ ಪ್ರಮೇಯಗಳು ಏರ್ಪಾಟ ಹೊಂದುವದು ಅಗತ್ಯವಾಗಿದೆ. ಪೂರ್ವಗ್ರಹಿಕೆಗೆ ಒಳಗಾಗದೆ ಪಕ್ಷಪಾತಕ್ಕೆ ಬೀಳದೆ ತನುಮನಗಳಿಗೆರಡಕ್ಕೂ ಮನ್ನಣೆಯನ್ನು ಸರಿಯಾಗಿ ಹಂಚಬೇಕು.

ಇಂದಿನ ವರೆಗೂ ಇವೆರಡರ ಅಭ್ಯಾಸವನ್ನೂ ಚೆನ್ನಾಗಿ ಮಾಡಿ, ಇವುಗಳ ಸರಿಸಮಾನ ದರ್ಜೆ, ಯೋಗ್ಯತೆ, ಅರ್ಹತೆಗಳನ್ನು ಜನರಿಗೆ ಮನವರಿಕೆಯಾಗಿರುವಂತೆ ಪ್ರಸ್ಥಾಪಿಸಲು ಯಾರೂ ಯತ್ನಿಸಿಲ್ಲವೆಂದು ದುಃಖದಿಂದ ಹೇಳಬೇಕಾಗಿದೆ. ಆದರೆ ಸೃಷ್ಟಿಯು ಮಾತ್ರ ಯಾರದಾರಿಯನ್ನೂ ಕಾಯುವದಿಲ್ಲ. ಪ್ರತಿಯೊಬ್ಬನ ಪ್ರತಿಯೊಂದು ತಪ್ಪಿಗೆ ತಕ್ಕ ಶಿಕ್ಷೆಯನ್ನು ವಿಧಿಸುವದು, ಮತ್ತು ಆಮೂಲಕ ನಮ್ಮಲ್ಲಿ ದೇಹಾತ್ಮ ಸಮಭಾವವು ಹುಟ್ಟುವಂತೆ ಸಾನುಭವ ಜ್ಞಾನಮಾಡಿಕೊಡುವದು. ಆ ಸಮಭಾವವನ್ನು ನಾವು ತಿಳಿದು ಆಚರಿಸುವ ವರೆಗೆ ನಮ್ಮ ತಪ್ಪುಗಳ ಪರಿಣಾಮನ್ನು ನಾವು ಭೋಗಿಸಲೇ ಬೇಕಲ್ಲವೆ?

ಆರೋಗ್ಯ ಸಂಪನ್ನವಾದ ಆಯುಷ್ಯಕ್ರಮಣವೂ ಒಂದು ದೊಡ್ಡ ಸದ್ಗುಣವೆಂದು ನೀವು ತಿಳಿಯದಿದ್ದರೆ, ನೀವು ಅಷ್ಟೊಂದು ಅನೀತಿವಂತರೇ ಸರಿ. ಮಾನಸಿಕ ನೀತಿವಂತಿಕೆಯಷ್ಟೇ ದೈಹಿಕ ಆರೋಗ್ಯವೂ ಮಹತ್ತ್ವಪೂರ್ಣವಾದುದು; ಅದೂ ಮಾನವನ ಧ್ಯೇಯವಾಗಲಿಕ್ಕೆ ತುಂಬಾ ಅರ್ಹತೆಯುಳ್ಳದ್ದು. ಆದ್ದರಿಂದ ಇವೆರಡನ್ನೂ ನೀವು ಗಳಿಸಲು ಯತ್ನಿ

ಸಿರಿ. ನೈತಿಕ ನಿಯಮಗಳನ್ನು ಮುರಿಯುವದು ಎಷ್ಟು ಪಾಪಕರವೋ ಎಷ್ಟು ಘಾತಕವೊ ಆರೋಗ್ಯದ ಕಟ್ಟಳೆಗಳನ್ನು ಮೀರುವದೂ ಅಷ್ಟೇ ಪಾಪಕರ, ಘಾತಕ. ಎಲ್ಲರೋಗಗಳೂ ಪಾಪದ ಚಿಹ್ನಗಳು. ಬೇನೆಯಿಂದ— ಅದು ಆನುವಂಶಿಕವೇ ಆಗಲಿ, ವೈಯಕ್ತಿಕವೇ ಆಗಲಿ-ಬಳಲುವವನು ಸದ್ಗುಣಿಯೆನಿಸಲಾರನು.

ಎಲ್ಲ ನೈತಿಕ ಸದ್ಗುಣಗಳೂ ಶಾರೀರಿಕ ಸದ್ಗುಣಗಳೂ ಒಂದರೊಡನೊಂದು ಸಮಾವೇಶವಾಗಿರುತ್ತವೆ. ಉದಾರವಾದ ಮನಸ್ಸು ಅಥವಾ ಆತ್ಮ ಎಂದರೆ ಉದಾರವಾದ ಮಿದುಳೆಂದು ಹೇಳಬಹುದು. ಅಧ್ಯಾತ್ಮವಾದಿಗಳ ಹಾಗೂ ಭೌತಿಕವಾದಿಗಳ ವಿಚಾರಸರಣಿಗಳನ್ನು ಪರಿಶೀಲಿಸಿ ನೋಡಲಾಗಿ ಕಂಡು ಬರುವದೇನೆಂದರೆ— ಇಂದಿಲ್ಲ ನಾಳೆಯಾದರೂ ಆಧ್ಯಾತ್ಮಿಕ. ಭೌತಿಕ ಸಮಸ್ಯೆಗಳು ಒಂದರಲ್ಲೊಂದು ಸಮ್ಮಿಶ್ರವಾಗುತ್ತವೆ; ಅಥವಾ ಆಧ್ಯಾತ್ಮಿಕ ವಿಷಯಗಳು ಭೌತಿಕಗಳಾಗಿಯೂ ಭೌತಿಕ ವಿಷಯಗಳು ಆಧ್ಯಾತ್ಮಿಕಗಳಾಗಿಯೂ ಪರ್ಯವಸಾನ ಹೊಂದುವವು.

ದೇಹದ ಸೌಂದರ್ಯ, ಶಕ್ತಿ, ಚಟುವಟಿಕೆ, ಆರೋಗ್ಯ ಇವುಗಳನ್ನು ಸಂಪಾದಿಸಿಕೊಳ್ಳಬೇಕಾಗುವದು. ಮತ್ತು ಇವುಗಳ ಬೆಲೆ ಮನಸಿನ ಶಕ್ತಿ, ಸೌಂದರ್ಯ, ಆರೋಗ್ಯಗಳಿಗಿಂತ ಯಾವ ರೀತಿಯಿಂದಲೂ ಕಡಿಮೆಯಿಲ್ಲೆಂದು ಒಪ್ಪಬೇಕಾದೀತು. ಮಿದುಳಿನ ವಿಕಾಸವಷ್ಟೇ ಮನುಷ್ಯನ ಹೆಗ್ಗುರಿಯಾಗಬಹುದೇ? ಮಿಕ್ಕೆಲ್ಲ ಅಂಗಗಳನ್ನು ಉಪೇಕ್ಷಿಸಿ ಅದೊಂದೇ ಬೆಳೆಯಬಹುದೇ? ಇದೆಂದೆಂದೂ ಸಾಧ್ಯವಿಲ್ಲ. ನಮ್ಮೆಲ್ಲ ಅಂಗಗಳೂ ಸರಿಸಮಾನವಾದವೆಂದು ನಮ್ಮ ಬುದ್ಧಿಯು ನಮಗೆ ಕಲಿಸುತ್ತಿರುವದು.

ಕುರೂಪ, ದೇಹವೃದ್ಧಿಯ ಅಪೂರ್ಣತೆ ಅಥವಾ ವ್ಯಂಗ್ಯ ಇವುಗಳು ಪಾಪದ ಕುರುಹುಗಳು; ಇಲ್ಲವೆ ಶರೀರದ ಸೊಬಗಿನ ವಿಷಯದಲ್ಲಿ ನಮಗಿರುವ ದುರ್ಲಕ್ಷ್ಯದ ದ್ಯೋತಕಗಳು. ಅಥವಾ ನಮ್ಮ ಯಾವುದೋ ತಪ್ಪಿನ ಫಲಗಳೆಂದೂ ಹೇಳಬಹುದು. ಏಕೆಂದರೆ ಕುರೂಪಿಗಳಿಂದ ದಂಪತಿಗಳು ಕೂಡ ಸುಪ್ರಜಾಜನನ ಶಾಸ್ತ್ರವನ್ನು ಚೆನ್ನಾಗಿ ಅಭ್ಯಸಿಸಿ, ಅದರಂತೆ ಸರಿ

ಯಾಗಿ ಆಚರಿಸಿದರೆ ವಾಂಛಿತ ಸಂತತಿಯನ್ನು ನಿರ್ಮಿಸಬಲ್ಲರು; ಇದಕ್ಕೆ ಉದಾಹರಣೆಗಳೂ ಎಷ್ಟೋ ಉಂಟು. ಶಿಲ್ಪಿಗಾಗಲಿ ಚಿತ್ರಕಾರನಿಗಾಗಲಿ ಇರುವ ಸೌಂದರ್ಯದ ಆದರ್ಶವು ಮಿಕ್ಕ ಯಾವ ಒಳ್ಳೆಯ ಆದರ್ಶಕ್ಕಿಂತಲೂ ಕಡಿಮೆಯದಲ್ಲ ಏಕೆಂದರೆ ಸೃಷ್ಟಿಯೋಜನೆಯಲ್ಲಿ ಇದು ಇತರ ಶಕ್ತಿಸೌಂದರ್ಯಗಳಿಂದ ಬೇರೆಯಲ್ಲ, ಇದನ್ನು ಬೇರ್ಪಡಿಸುವುದು ಸಾಧ್ಯವೂ ಅಲ್ಲ. ಮಿಕ್ಕೆಲ್ಲವುಗಳಂತ ಇದೂ ಸತ್ಯ ಶೋಧನೆಯ ಮಾರ್ಗವಾಗಿರುವದು ಸತ್ಯವನ್ನವಲಂಬಿಸಿರುವಂತಹ ಎಲ್ಲಾ ಆದರ್ಶಗಳೂ ಅಷ್ಟೇ ಅನಂತವಾಗಿರುವವು ಪ್ರತಿಯೊಂದೂ ಒಂದೊಂದು ಧರ್ಮವನ್ನು ಸ್ಥಾಪಿಸಲು ಯೋಗ್ಯತೆಯುಳ್ಳದ್ದಾಗಿದೆ ಜಗತ್ತಿನಲ್ಲಿ ಉದ್ಧಾರಕವಾದ ಒಂದೇ ಒಂದು ಧರ್ಮವಿಲ್ಲ, ನಾವು ಸರಿಯಾಗಿ ಅನುಸರಿಸಿ ನಡೆದದ್ದಾದರೆ ನಮ್ಮನ್ನಾವರಿಸಿರುವಂಥ ಸೃಷ್ಟಿಯೊಳಗಿನ ಪ್ರತಿಯೊಂದೂ ಧರ್ಮವೇ. ಹಾಗಾದರೆ ಮನುಷ್ಯನ ನಿಜವಾದ ಧರ್ಮವಾವದು? ಯಾವ ಕಲ್ಪನೆ. ಅಥವಾ ವ್ಯಾಪಾರವು ಮನುಷ್ಯನ ಹೃದಯಕ್ಕೆ ವಿಶೇಷವಾಗಿ ಅಂಟಿಕೊಳ್ಳುವದೋ, ಅವನಲ್ಲಿ ಉಚ್ಚವಾದ ಪ್ರೇರಣೆಯನ್ನು ( enthusiasm ) ಪ್ರೇರಿಸುವದೋ ಅದೇ. ಇದು ಅನಂತವೆಂಬ ಭಾವನೆ ಅಥವಾ ಕಲ್ಪನೆಯಾಗಿರುವದು, ಇದನ್ನೇ ನಾವು ಬಯಸುವದು, ಇದಕ್ಕೇ ಧರ್ಮವೆಂದು ಹೆಸರು. ಈ ಬಗೆಯ ಪ್ರೇರಣೆ, ಉತ್ಸಾಹ ಅಥವಾ ಆವರಿಸುವಿಕೆ ಇಲ್ಲದ ವ್ಯಾಪಾರವು ಅಥವಾ ಧರ್ಮವು ನಿಷ್ಪ್ರಯೋಜನಕ, ಆ ಧರ್ಮದ ಆರಾಧಕನು ದುರ್ದೈವಿ.

ಇಂಥ ತಿಳಿವಳಿಕೆಗ ಪರಂಪರಾಗತವಾದ ಧಾರ್ಮಿಕ ಕಲ್ಪನ ಇಲ್ಲವೆ ಆಧ್ಯಾತ್ಮಿಕ ವಿಚಾರ ಇವೇ ದೊಡ್ಡ ಆತಂಕಗಳಾಗಿವೆ. ಎಲ್ಲ ಮನುಷ್ಯರು ಒಂದು, ನಿಸರ್ಗದ ಎಲ್ಲ ಅಂಗಗಳು ಅಥವಾ ಅಂಶಗಳು ಒಂದು ಎಂಬ ಭಾವನೆಗೆ ನಮ್ಮ ಧರ್ಮಗಳೇ ಅಡ್ಡ ಬರುತ್ತಿವೆ. ನಮ್ಮ ಸಮಾಜದಲ್ಲಿಯ ಏಕಪಕ್ಷೀಯ ಧಾರ್ಮಿಕನ 'ಆಳಿಕೆಯ ತತ್ವವೇ ಮನುಷ್ಯರ ಅಂತಃಕರಣಗಳಿಗೆ ಒಂದಾಗಲು ಅಡ್ಡಿಯಾಗಿದೆ. ಪರಸ್ಪರ ಸಮತಾಭಾವ, ಸಹಾನುಭೂತಿ, ಆದರ ಇಲ್ಲದಲ್ಲಿ ಪ್ರೇಮವು ಹೆಚ್ಚು ದಿನ ಬದುಕಲಾರದು. ನಮ್ಮ ಪ್ರಕೃತಿಯ ಎಲ್ಲ ಭಾಗಗಳು ಅಷ್ಟಷ್ಟೇ ಪರಿಪೂರ್ಣವಿರುವವು;

ಮತ್ತು ಅಷ್ಟಷ್ಟೇ ಆದರಣೀಯವಾಗಿರುವವು. ಆದ್ದರಿಂದ ನಾವೀಗ ಪಾಶವೀಯವೆಂದೂ ಷಡ್ರಿಪುಗಳೆಂದೂ ವಿಕಾರಗಳೆಂದೂ ಕರೆಯುವ ವೃತ್ತಿ ಯಾವದನ್ನು ಆಧ್ಯಾತ್ಮಿಕ ವಿಷಯುಗಳಿಗಿಂತ ಕೀಳುತರಗತಿಯದೆಂದು ಕ್ಷಣಮಾತ್ರವೂ ಯೋಚಿಸಲಾಗದು. ಅವು ಮಿಕ್ಕವುಗಳಂತೆಯೇ ಮನು ಷ್ಯನ ಮೇಲೆ ಪವಿತ್ರ ಸಂಸ್ಕಾರಗಳನ್ನು ಮಾಡುತ್ತಿರುವವು, ಅವನ ಶೀಲ ವನ್ನು ಬಲಪಡಿಸುವವು, ಉದಾರವಾಗಿ ಮಾಡುವವು. ಆದ್ದರಿಂದ 'ನನ್ನ ಪ್ರಕೃತಿಯಲ್ಲಿ ಇದೊಂದು ಭಾಗವು ಹೆಚ್ಚು ಸೊಗಸಾದದ್ದು, ಪವಿತ್ರ ವಾದದ್ದು ಬೆಲೆಯುಳ್ಳದ್ದು, ನಾನದನ್ನು ಮಾತ್ರ ಬೆಳೆಯಿಸಿ ಕೊಳ್ಳುವೆನು' ಎಂದೆನ್ನಲು ಮನುಷ್ಯನಿಗ ಅಧಿಕಾರವಿಲ್ಲ. ಎಲ್ಲವರಲ್ಲಿಯೂ ಸಮಾನ ಸೌಂದರ್ಯವನ್ನು ಕಂಡುಕೊಂಡು ಎಲ್ಲವನ್ನು ಬೆಳೆಯಿಸಿಕೊಳ್ಳುವನು ಅವನ ಕರ್ತವ್ಯವಾಗಿದೆ.

ಆರೋಗ್ಯಪೂರ್ಣ ಜೀವಿತವು ಶಾರೀರಿಕ ಸದ್ಗುಣಗಳ ಮುಕುಟ ವೆಂದಮೇಲೆ, ಮುಪ್ಪಿನಿಂದ ಉಂಟಾದ ಸ್ವಾಭಾವಿಕ ಮರಣದ ವಿನಾ ಮಿಕ್ಕೆಲ್ಲ ಬಗೆಯ ಸಾವು ದೊಡ್ಡ ಪಾಪದ ದ್ಯೋತಕವೇ ಸರಿ. ನಿಸರ್ಗದ ಶಿಕ್ಷೆಯಾದ ಬೇನೆಯ ತೀವ್ರತೆಯ ಪ್ರಮಾಣದಿಂದ ಶಾರೀರಿಕ ಪಾಪದ ಘನ ತೆಯನ್ನು ಅಳೆಯತಕ್ಕದ್ದು. ಸಾರಾಂಶವೇನೆಂದರೆ, ಅಕಾಲಮರಣಕ್ಕಿಂತ ಹೆಚ್ಚಿನ ಪಾಪವಿಲ್ಲ. ಎಲ್ಲ ಅಕಾಲಿಕ ಮರಣಗಳು ಸೃಷ್ಟಿಧರ್ಮಕ್ಕೆ ಹೊರ ತಾದವು. ಮುಪ್ಪು ಕಾಣದೆ ಅಸ್ವಾಭಾವಿಕವಾದ ಸಾವಿಗೆ ಈಡಾಗು ವವನು, ಅದೆಷ್ಟು ಗುಣವಂತನಾಗಿದ್ದರೂ ಅಧ್ಯಾತ್ಮವಾದಿಯಿದ್ದರೂ ನೈತಿಕಶಿರೋಮಣಿಯಿದ್ದರೂ ಅವನ ಮೃತ್ಯುವಿನಿಂದ ಕಂಡುಬರುವ ದೇನೆಂದರೆ, ಅವನು ತನ್ನ ಆಯುಷ್ಯವನ್ನು ಸರಿಯಾಗಿ ಕಳೆಯುತ್ತಿರಲಿಲ್ಲ; ಎಂದರೆ ತನ್ನ ಎಲ್ಲ ಅಂಗಗಳ ವಿಕಾಸದ ಕಡೆಗೆ ಅವನು ಗಮನಕೊಡು ತ್ತಿರಲಿಲ್ಲ, ಆದ್ದರಿಂದ ಅವನ ಬಾಳಿಕೆ ಅಷ್ಟರ ಮಟ್ಟಿಗೆ ದೋಷಾರ್ಹವೇ.

ನಾವು ಆದರ್ಶವೆಂದು ತಿಳಿದುಕೊಂಡಿರುವ ವೀರಮರಣವು ಜಗ ತ್ತಿಗೆ ಅತಿಘಾತುಕವಾದದ್ದು. ಅದು ವಸ್ತುಸ್ಥಿತಿಯ ಅಪೂರ್ಣತೆಯ ದ್ಯೋತಕವಾಗಿದೆ. "ನನ್ನ ಸುತ್ತು ಮುತ್ತಲಿನ ಜನರು ಪಾಪ ಮಾಡು

ತ್ತಿದ್ದಾರೆ. ಆದ್ದರಿಂದ ನಾನೂ ಪಾಪ ಮಾಡಲೇಬೇಕು; ಆದರೆ ಅವರ ಉದ್ಧಾರಕ್ಕಾಗಿ ನಾನು ನನ್ನ ಸರ್ವಸ್ವವನ್ನು ಬಲಿಗೊಡಲೇಬೇಕು'' ಎಂಬ ವೀರನ ಮಾತು ತೀರಾ ಸತ್ಯವಾದದ್ದು, ಸೊಗಸಾದದ್ದು; ಆದರೆ ಹೆಗ್ಗುರಿಯು ಯಾವ ತೆರನಾದ ಹಿತವನ್ನೂ ಬೆಲೆಯಾಗಿ ಕೊಡಲು ಒಪ್ಪುವದಿಲ್ಲ. ಯಾವ ಅಕಾಲಿಕ ಮರಣವನ್ನೂ- ವೀರ ಮರಣವನ್ನು ಕೂಡ- ಮನುಷ್ಯನು ಗುರಿಯನ್ನಾಗಿ ಇಟ್ಟುಕೊಳ್ಳಲಾಗದು. ಪ್ರತಿಯೊಂದು ದೃಷ್ಟಿಯಿಂದಲೂ ಸ್ವಾಭಾವಿಕವಾದ ಪೂರ್ಣಾಯುಷ್ಯವು ಸ್ವಾಭಾವಿಕವಾಗಿ ಪರ್ಯವಸಾನ ಹೊಂದಬೇಕೆಂಬುದೇ ಮಾನವನ ಗುರಿಯಾಗಿರಬೇಕು. ನಮ್ಮಾ ಭೌತಿಕ ಜೀವನದ ಅಗಣಿತವಾದ ಬೆಲೆಯ ಹಾಗೂ ಘನತೆಯ ಬಗ್ಗೆ ಸಾಕಷ್ಟು ಅರಿವಿಲ್ಲದಿರುವದು, ಅದನ್ನು ಅನಾದರದಿಂದ ಕಾಣುವದು, ಅದು ನಮ್ಮ ಪವಿತ್ರವಾದ ಸೊತ್ತೆಂದು ತಿಳಿಯದೆ ಅದರ ರಕ್ಷಣೆಯೊಂದು ಕರ್ತವ್ಯವೆಂದು ಬಗೆಯದಿರುವದು ಇವುಗಳೇ ನಮ್ಮೆಲ್ಲರಲ್ಲಿ ಕಂಡುಬರುವ ಸ್ವೇಚ್ಛಾವರ್ತನಕ್ಕೆ ಬಹ್ವಂಶದಿಂದ ಕಾರಣಗಳಾಗಿವೆ; ಇವು ಮಾನವಜೀವನಕ್ಕೆ ಅತ್ಯಂತ ಕಲಂಕಗಳಾಗಿವೆ.

ಇಡೀ ಆಯುಷ್ಯವನ್ನು ಸ್ವಾಭಾವಿಕವಾದ ಬಾಳನ್ನು ಬಾಳಿ ನಡೆಯಿಸಬೇಕೆಂಬದನ್ನೂ ಸೊಗಸಾದ ಸ್ವಾಭಾವಿಕ ಮರಣದಿಂದಲೇ ಅದನ್ನು ಮುಗಿಸಬೇಕೆಂಬದನ್ನೂ ಪ್ರತಿಯೊಬ್ಬನು ತನ್ನ ಗುರಿಯಾಗಿಟ್ಟುಕೊಳ್ಳಬೇಕು; ಇತರರಿಗೂ ಹಾಗೆ ಕಲಿಸಬೇಕು. 'ಸ್ವಾಭಾವಿಕವಾಗಿ ಬಾಳುವದು, ಸಹಜವಾಗಿ ಸಾಯುವದು' ಎಂಬ ಗುರಿಯು ತೋರಿಕೆಗೆ ಬಲು ಸುಲಭವಾಗಿರುವದು; ಆದರೆ ಇದನ್ನು ಆಚರಿಸುವದು ಮಾತ್ರ ಬಹಳ ಬಿರಿಯಾಗಿರುವದು. ಇದನ್ನು ಸಾಧಿಸಲು ಯತ್ನಿಸುವದರಲ್ಲಿ ನಮ್ಮ ಸದ್ಗುಣದ, ಕರ್ತವ್ಯದ ಹಾಗೂ ಧರ್ಮದ ಅಂಶವು ಅದೆಷ್ಟಿರುವದೆಂಬ ಅರಿವು ನಮಗುಂಟೇ?

ಆತ್ಮಕ್ಕೆ ಕೊಡುವಷ್ಟು ಮನ್ನಣೆಯನ್ನೇ ದೇಹಕ್ಕೂ ಕೊಡಲು ಕಲಿಸುವಂತೆ, ದೇಹದೊಳಗಿನ ಎಲ್ಲ ಅಂಗಾಂಗಗಳಿಗೂ ಸಮನಾದ ಮರ್ಯಾದೆಯನ್ನು ಕೊಡಲು ಪ್ರಕೃತಿಧರ್ಮವು ಕಲಿಸುತ್ತಿರುವದು. ನಮ್ಮ ವಿಸರ್ಜಕ

ಇಂದ್ರಿಯಗಳಿಗೆ ಮತ್ತು ಗುಹ್ಯೇಂದ್ರಿಯಗಳಿಗೆ ಎಂದರೆ ಜನನೇಂದ್ರಿಯ ಗಳಿಗೆ ತಕ್ಕ ಮರ್ಯಾದೆಯನ್ನು ಕೊಡದ್ದರಿಂದ, ಅವುಗಳ ಹೆಸರೆತ್ತುವದು ಕೂಡ ಅಶ್ಲೀಲ--ಭೀಭತ್ಸ- ಶಿಷ್ಟರಿಗೆ ಅಸಮ್ಮತವೆಂದು ತಿಳಿಯುವದರಿಂದ, ಆ ವಿಷಯವನ್ನು ಏನೋ ಒಂದು ಬಗೆಯ ಮುಚ್ಚು ಮರೆಯಲ್ಲಿ ಇಟ್ಟದ್ದ ರಿಂದ ಒದಗಿದಷ್ಟು ಕೇಡು ಮತ್ತಾವುದರಿಂದಲೂ ಆಗಿಲ್ಲವೆಂದು ಹೇಳ ಬಹುದು. ಮನುಷ್ಯನ ಹೆಚ್ಚಿನ ದುಃಖಕ್ಕಾದರೂ ಇದೇ ಕಾರಣ. ಜನ ನೇಂದ್ರಿಯಗಳಿಗೆ ಸಂಬಂಧಪಟ್ಟ ಮನೋವಿಕಾರಗಳಂತೆ ಆ ಇಂದ್ರಿಯ ಗಳಾದರೂ ಕೀಳುತರಗತಿಯವೆಂದೂ ಅವುಗಳ ಬಯಕೆಗಳನ್ನು ಪೂರಯಿಸಿ ಕೊಳ್ಳುವದು ಪಶುವೃತ್ತಿಯೆಂದೂ ಜನರು ಭಾವಿಸುತ್ತಾರೆ. (ಇಡೀ ಮನುಷ್ಯನನ್ನು ಕೀಳೆಂದು ಭಾವಿಸಿದ ವಿನಾ ಅವನ ಯಾವದೊಂದು ಭಾಗ ವನ್ನು ಕೀಳೆಂದು ಭಾವಿಸುವದು ತಪ್ಪಾಗುವದು.) ಜನನೇಂದ್ರಿಯಗಳ ಬಗ್ಗೆ ಇರುವ ಈ ದುಃಖಕಾರಕ ತಪ್ಪು ತಿಳಿವಳಿಕೆಯಿಂದುಂಟಾದ ದುಷ್ಪರಿ ಣಾಮಗಳು ಎಷ್ಟೆಂದು ಹೇಳುವದು ಸಾಧ್ಯವಿಲ್ಲ. ಇವುಗಳ ಕಾರ್ಯ ಮತ್ತು ವರ್ಚಸ್ಸು ಪಾವಿತ್ರ್ಯದಲ್ಲಿಯಾಗಲಿ ಮಹತ್ವದಲ್ಲಿಯಾಗಲಿ ಮತ್ತಾವ ಇಂದ್ರಿಯಗಳ ಕಾರ್ಯವರ್ಚಸ್ಸುಗಳಿಗೂ ಕಡಿಮೆಯಾಗಿಲ್ಲ. ಹೀಗಿದ್ದರೂ ಅವುಗಳ ಆರೋಗ್ಯ-ಅನಾರೋಗ್ಯಗಳ ಕಡೆಗೆ ಜನರ ಲಕ್ಷ್ಯವೇ ಇಲ್ಲ! ಮತ್ತು ಯಾವದೇ ಮಾನಸಿಕ ಅಥವಾ ಶಾರೀರಿಕ ತಪ್ಪಿಗಾಗಿ ನಮ್ಮಲ್ಲಿ ಒಂದು ಬಗೆಯ ಕನಿಕರ ಅಥವಾ ಸಹಾನುಭೂತಿ ಹುಟ್ಟುವಂತೆ ಜನನೇಂದ್ರಿಯ ಗಳ ಬೇನೆಗಳಿಗಾಗಿ ಹುಟ್ಟುವದಿಲ್ಲ. ಅದೇಕೆ, ಉಪಹಾಸ ಮತ್ತು ತಿರಸ್ಕಾರಗಳೇ ಹುಟ್ಟುತ್ತವೆ !

ಇತರ ಇಂದ್ರಿಯಗಳ ಅಭ್ಯಾಸಮಾಡುವಂತೆ ಜನನೇಂದ್ರಿಯಗಳ ಗುಣಧರ್ಮಗಳ ಅಭ್ಯಾಸವನ್ನಾದರೂ ಅಷ್ಟೇ ಮರ್ಯಾದೆಯಿಂದ ಮಾಡಿ, ಸರಿಯಾಗಿ ನಡೆದುಕೊಳ್ಳುವದು ಅಗತ್ಯವಾಗಿದೆ. ಇಲ್ಲವಾದರೆ ಅವುಗಳ ನಷ್ಟದಿಂದ ಇಡೀ ದೇಹಕ್ಕೆ ನಷ್ಟವುಂಟಾಗದಿರದು. ಪ್ರಕೃತಿಯ ಶಾಂತಿಮಯ ದೃಷ್ಟಿಕೋನದಲ್ಲಿ ನಮ್ಮ ನಾಚಿಕೆ, ಮರ್ಯಾದೆ, ಸೋಮಾರಿ ತ್ವನ ಮೊದಲಾದ ಹುಚ್ಚುತನದ ಪರದೆಗಳು ಅಳಿದುಹೋಗುವವು. ಮತ್ತು

ನಿಯಮ ಭಂಗಕ್ಕಾಗಿ ಪ್ರಕೃತಿಯು ಶಿಕ್ಷೆಯನ್ನು ವಿಧಿಸಿದಾಗ ಅಪರಾಧಿಯು ಈ ನೆವಗಳು ತುಟಿಗಳಲ್ಲಿಯೇ ಮಾಯವಾಗುವವು. ನಮ್ಮ ಪೂರ್ವಜರಂತೆ ನಾವು ಇವುಗಳ ಅಥವಾ ವಿಸರ್ಜಕ ಇಂದಿಯಗಳ ಬಗ್ಗೆ ಗೌಪ್ಯ, ಅವಿನಯ, ಅಪಾವಿತ್ರ್ಯ, ಅಶ್ಲೀಲತೆ ಮುಂತಾದ ಯಾವ ಭಾವನೆಯನ್ನು ತಾಳಕೂಡದು. ಉಳಿದ ಇಂದ್ರಿಯಗಳನ್ನು ನೋಡುವಂತೆ ಇವುಗಳನ್ನಾದರೂ ಪವಿತ್ರ ದೃಷ್ಟಿಂದ ನೋಡತಕ್ಕದ್ದು.

ನಮ್ಮವರ ಹಳೆಯ ಹುಚ್ಚು ಕಲ್ಪನೆಗಳು ಮನುಷ್ಯತ್ವಕ್ಕೆ ಕಲಂಕವನ್ನೇ ಹಚ್ಚಿರುವವು. ವೈದ್ಯರ ಪ್ರಯತ್ನಗಳನ್ನು ನಿಷ್ಫಲಗೊಳಿಸಿರುವವು. ಈ ಇಂದ್ರಿಯಗಳ ಬೇನೆಗಳಿಂದ ಬಳಲುವವರ ದುಃಖಗಳು ಈ ಮಾದರಿಯ ಕೀಳುಭಾವನೆಗಳಿಂದ ಹತ್ತು ಪಟ್ಟು ಹೆಚ್ಚಾಗಿರುವವು. ಪ್ರಕೃತಿ ಧರ್ಮವು ನಮ್ಮೆಲ್ಲರಿಂದ ಅಪೇಕ್ಷಿಸುವಂತೆ ನಾವು ಶರೀರ ರಚನಾಶಾಸ್ತ್ರದ ಅಭ್ಯಾಸಮಾಡಿ ನಡೆದರೆ ಮಾತ್ರ, ಇಂಥ ಆಕುಂಚಿತ, ಅಭದ್ರ, ಕೊಳಕು ಕಲ್ಪನೆಗಳು ಮಾಯವಾಗುವವು.

ಒಟ್ಟಾರೆ, ಇಹದ ಬಗೆಗಿರುವ ಅಲಕ್ಷ್ಯ-ಅನಾದರಗಳೇ ಇಡೀ ಮಾನವ ಜಾತಿಯ ದುಃಖಕ್ಕೆ ಕಾರಣಗಳಾಗಿವೆ. ಭೌತಿಕ ಶಾಸ್ತ್ರಜ್ಞರಾಗಲಿ ಭೌತಿಕ ಉದ್ಯೋಗಸ್ಥರಾಗಲಿ ಅವುಗಳ ಬಗ್ಗೆ ಧಾರ್ಮಿಕ ಭಾವನೆಯನ್ನು ತಾಳದೆ ಇದ್ದುದ್ದರಿಂದ ತಮ್ಮನ್ನು ತಾವೇ ಕೀಳುಮಾಡಿಕೊಂಡಿರುವರು ಪ್ರಕೃತಿ ಧರ್ಮವು ಆಧ್ಯಾತ್ಮಿಕ ಧರ್ಮಕ್ಕೆ ಯಾವ ತೆರನಾದ ಹೆಚ್ಚಿನ ಶ್ರೇಷ್ಠತೆಯನ್ನೂ ಕೊಡಲಾರದು; ತನಗೂ ಅಷ್ಟೇ ಮನ್ನಣೆಯನ್ನು ಎಲ್ಲರಿಂದ ಅಪೇಕ್ಷಿಸುವದು. ಇದನ್ನು ಅಲ್ಲಗಳೆಯುವ ವ್ಯಕ್ತಿ ಅಥವಾ ಯುಗವು ಖಂಡಿತವಾಗಿ ದುಃಖವನ್ನು ಅನುಭವಿಸಿಯೇ ತೀರುವದು. ಎಂದರೆ ಪ್ರಕೃತಿ ಧರ್ಮವು ಅಧ್ಯಾತ್ಮವನ್ನು ಕಡಿಮೆ ಪ್ರೀತಿಸುತ್ತದೆಂದಲ್ಲ, ಆದರೆ ಅದು ಇಡೀ ಮಾನವ್ಯವನ್ನು ಹೆಚ್ಚಾಗಿ ಪ್ರೀತಿಸುತ್ತದೆ.



# ವೈದ್ಯಕೀಯ ಕೆಲಸದಲ್ಲಿ ಕಣ್ಣು ಮುಚ್ಚಾಟ



ಒಂದಾನೊಂದು ಕಾಲಕ್ಕೆ, ಎಂದರ ಚರಕ ಮತ್ತು ಸುಶ್ರುತರ ಕಾಲಕ್ಕೆ, ನಮ್ಮ ವೈದ್ಯರೂ ಹಕೀಮರೂ ದೇಹರಚನಾಶಾಸ್ತ್ರದ, ಶಸ್ತ್ರ ಕ್ರಿಯೆಯ ಹಾಗೂ ಶವವಿಚ್ಛೇದನ ಶಾಸ್ತ್ರದ ಅಭ್ಯಾಸವನ್ನು ಮಾಡುತ್ತಿದ್ದಿರಬಹುದು. ಆದರೆ ಮುಂದೆ ಜೈನ-ಬೌದ್ಧ ಮತಗಳ ಅಹಿಂಸಾವಾದವು ಪ್ರಬಲಿಸಿದಂತೆ, ಆಧ್ಯಾತ್ಮಿಕ ನೈತಿಕ ವಿಷಯಗಳ ಕಡೆಗೆ ಅವರ ಗಮನವು ಹೆಚ್ಚಾಗಿ ತಿರುಗಿತು; ಶರೀರ ಶಾಸ್ತ್ರದ ಕಡೆಗೆ ದುರ್ಲಕ್ಷ್ಯವಾಗಿ ಅದರ ಜ್ಞಾನವು ಲುಪ್ತವಾಗುತ್ತ ಬಂತು ಕೊನೆಗೆ ಕೇವಲ ಲಕ್ಷಣಗಳಿಂದಲೇ ರೋಗಗಳ ನಿದಾನ ನಡಯತೊಡಗಿತು; ಔಷಧೋಪಚಾರ, ದೈವವಾದ, ಮಂತ್ರತಂತ್ರ ಇತ್ಯಾದಿಗಳೇ ರೋಗನಿವಾರಣೋಪಾಯಗಳಾಗಿ ಕೂತವು. ರಾಸಾಯನಿಕ ಉಪಚಾರಗಳು ಹೆಚ್ಚಿ ವನಸ್ಪತಿಯ ಸುಲಭೋಪಾಯಗಳು ಅಡಗಿಹೋದವು; ವೈದ್ಯಶಾಸ್ತ್ರದ ಬಗ್ಗ ಒಂದು ಬಗೆಯ ಗೌಪ್ಯವುಂಟಾಗಿ ವೈದ್ಯರ ಹಾಗೂ ಹಕೀಮರ ವಿಷಯದಲ್ಲಿ ಅದ್ಭುತ ದಂತಕಥೆಗಳು ಹುಟ್ಟಿದವು. ಬರುಬರುತ್ತ ಪಾಶ್ಚಾತ್ಯ ವೈದ್ಯಶಾಸ್ತ್ರದ ಎಂದರೆ ಆಲೋಪಥಿಕ್ ಶಾಸ್ತ್ರದ ಸಂಸರ್ಗದಿಂದ ನಮ್ಮ ಮೊದಲಿನ ಆಹಾರ ವಿಹಾರಗಳ ಬಗ್ಗೆ ಅಲಕ್ಷ್ಯ ತಿರಸ್ಕಾರಗಳುಂಟಾದವು; ರೋಗ ಪ್ರತಿಬಂಧಕವಾದ ಆರೋಗ್ಯ ಶಾಸ್ತ್ರವು ಮೂಲೆಗುಂಪಾಗಿ ಪೇಟೆಂಟ್ ಔಷಧಗಳ ಸಂತೆ ನೆರೆಯಿತು. ಇದರಿಂದ ಜನರಲ್ಲಿ ಆರೋಗ್ಯ ಶಾಸ್ತ್ರದ ಹಾಗೂ ಔಷಧಿಶಾಸ್ತ್ರದ ಅಜ್ಞಾನ ಬೆಳೆದು, ಗೊಡ್ಡು ವೈರಾಗ್ಯವು ಹೆಚ್ಚಿತು; ಜನರು ಹೆಚ್ಚು ದುಃಖಕ್ಕೆ ತುತ್ತಾದರು. ಅನೈತಿಕ ಕಲ್ಪನೆಗಳಿಂದ ಜನನೇಂದ್ರಿಯಗಳ ರೋಗಗಳ ಸರಿಯಾದ ಉಪಚಾರ ನಡೆಯದಂತಾಗಿ, ಜನರು ಸಿಕ್ಕ ಸಿಕ್ಕ ಜನರಿಂದ ಉಪಚಾರಗಳನ್ನು ಹೊಂದಿ ತಮ್ಮ ಮಾನ, ಅರ್ಥ, ಆರೋಗ್ಯಗಳನ್ನು ಬಲಿಗೊಡತೊಡಗಿದರು.

ಪರಿಸ್ಥಿತಿಯು ಹೀಗಿರುವಲ್ಲಿ, ಭೌತಿಕ ಶಾಸ್ತ್ರವನ್ನೇ ಗುರಿಯನ್ನಾಗಿಟ್ಟು ಕೊಂಡು ಬಹುಜನ ಡಾಕ್ಟರರು ಶರೀರಶಾಸ್ತ್ರವನ್ನೇ ಹೆಚ್ಚಾಗಿ ಕಲಿ ತದ್ದರಿಂದ, ಅವರಲ್ಲಿ ನೈತಿಕ ಕಲ್ಪನೆಗಳು ಸಾಕಷ್ಟಿಲ್ಲವಾಗಿದೆ. ಕೆಲಜನ ಡಾಕ್ಟರರನ್ನು ಬಿಟ್ಟರೆ ಮಿಕ್ಕ ಸಾಮಾನ್ಯ ಡಾಕ್ಟರರು ಹೆಚ್ಚು ಆಳವಾಗಿ ಅಭ್ಯಾಸವನ್ನು ಕೂಡ ಮಾಡಿರುವದಿಲ್ಲ. ಆದ್ದರಿಂದ ಅವರಿಗೆ ದೇಹರಚ ನೆಯ ಮತ್ತು ಇಂದ್ರಿಯ ವಿಜ್ಞಾನಶಾಸ್ತ್ರದ ಗೂಢ ರಹಸ್ಯಗಳ ಸ್ವಾರ ಸ್ಯವು ಹುಚ್ಚು ಹಿಡಿಸುವದಿಲ್ಲ. ಆದ್ದರಿಂದ ಅವರ ಜ್ಞಾನವು ಅಷ್ಟಕ್ಕಷ್ಟೇ ಎಂದು ಹೇಳಬಹುದು. ( Superficial ) ಈ ಜ್ಞಾನದಲ್ಲಿಯೂ ಅಧ್ಯಾತ್ಮ ಜ್ಞಾನವು ಅಡಕವಾಗಿದೆಯೆಂದು ಅವರು ಭಾವಿಸುವದಿಲ್ಲ. ಮೆಡಿಕಲ್ ಸ್ಕೂಲು-ಕಾಲೇಜುಗಳಲ್ಲಿ ಕಲಿಯುತ್ತಿರುವ ಎಷ್ಟೋ ಜನ ವಿದ್ಯಾರ್ಥಿಗಳ ಅವಾಚ್ಯ ಶಬ್ದಗಳನ್ನು ಕೇಳಿದರೆ--ಶವವಿಚ್ಛೇದನಾರ್ಥ ವಾಗಿ ಬಂದ ಹೆಣ್ಣುಮಕ್ಕಳ ದೇಹವನ್ನು ನೋಡಲು, ಸ್ತ್ರೀ ರೋಗಿಗಳ ಚಿಕಿತ್ಸೆ ಮಾಡಲು, ಪ್ರಸೂತಿ ಗೃಹದೊಳಗೆ ಹೋಗಲು ಅವರು ಕಾತರ ರಾಗಿರುವದನ್ನು ನೋಡಿದರೆ—ಅವರ ದೃಷ್ಟಿಯೂ ಅವರ ಉದ್ದೇಶವೂ ಎಷ್ಟು ಆಕುಂಚಿತವಾದದ್ದು, ಎಷ್ಟು ಸ್ವಾರ್ಥಪ್ರೇರಿತವಾದದ್ದು, ಅದೆಷ್ಟು ಕುತ್ಸಿತವಾದದ್ದು ಇರುವದೆಂಬದು ಒಡೆದು ಕಾಣುತ್ತದೆ. ಮೋಕ್ಷಕ್ಕೆ ಸಾಧನವಾದಂಥ ಈ ದೇಹವು ಕಿಂಚಿತ್ತಾದರೂ ಪವಿತ್ರವಾದದ್ದೆಂಬ, ಆದರಣೀಯವೆಂಬ ಭಾವನೆ ಅವರ ದೃಷ್ಟಿಯಲ್ಲಿ ಕಂಡುಬರುವದಿಲ್ಲ. ಅದೊಂದು ಕೇವಲ ಯಂತ್ರವೆಂದೇ ಅವರ ತಿಳಿವಳಿಕೆ. ಇದರಿಂದ ಡಾಕ್ಟರರಿಗೆ ಲೌಕಿಕದೃಷ್ಟಿಯಿಂದಷ್ಟೇ ಬೆಲೆ, ಅದೂ ತಾತ್ಪೂರ್ತಿಕ; ಆಧ್ಯಾತ್ಮಿಕ ದೃಷ್ಟಿಯಿಂದ ಅವರಿಗೆ ಧರ್ಮಗುರುಗಳಂತೆ, ಕವಿಗಳಂತೆ, ಸಾಹಿತಿಗಳಂತೆ, ಕಲಾಕೋವಿದರಂತೆ ಉಚ್ಚಸ್ಥಾನವಿರುವದಿಲ್ಲ. ಇತ್ತಿತ್ತ ಲಾಗಿ ಡಾಕ್ಟರರ ಲಕ್ಷ್ಯವು ಕಿಂಚಿತ್ ಆರೋಗ್ಯಶಾಸ್ತ್ರದ ಕಡೆಗೆ ಹತ್ತಿರುವ ದಾದರೂ ಅದು ಬಹಳ ಮಟ್ಟಿಗೆ ರೋಗನಿವಾರಣೆಯ ಕಡೆಗೆ-ಅಲ್ಲದೆ, ಆರೋಗ್ಯದ ಸಾಧನದ ವಿಷಯದಲ್ಲಿ ಜನರು ಅಜ್ಞಾನಿಗಳಾಗಿಯೇ ಉಳಿ ಯುವಂತೆ ಅವರ ಶಾಸ್ತ್ರಜ್ಞಾನವು ಉಪಯೋಗಿಸಲ್ಪಡುತ್ತದೆ. ಇದರ

ಪರಿಣಾಮವಾಗಿ, ಡಾಕ್ಟರರಲ್ಲಿ ವ್ಯಾಪಾರೀ ದೃಷ್ಟಿಯು ಹೆಚ್ಚಾಗಿ ಅವರು ಅಜ್ಞರಿಂದ ಶಕ್ಯವಿದ್ದಷ್ಟು ಲಾಭಪಡೆಯುವವರೆಂದು ಜನರಿಗೆ ಅವರ ಬಗ್ಗೆ ತಿರಸ್ಕಾರ ಹುಟ್ಟಿದೆ. ಅವರ ವ್ಯವಸಾಯಕ್ಕೆ ಉಚ್ಚಧ್ಯೇಯವಿಲ್ಲದ್ದರಿಂದ ಡಾಕ್ಟರ್-ಡಾಕ್ಟರರೊಳಗೆ ಮತ್ಸರ ಬೆಳೆದಿದೆ. ದೇಹ ಧರ್ಮದ ಬಗ್ಗೆ ಜನರಲ್ಲಿ ಆದರವನ್ನು ಹುಟ್ಟಿಸುವ ತಮ್ಮ ಕರ್ತವ್ಯವನ್ನು ಅವರು ಸರಿಯಾಗಿ ನೆರವೇರಿಸದವರಾಗಿದ್ದಾರೆ. ಸಮಾಜದ ಉದ್ಧಾರ ದೃಷ್ಟಿಯಿಂದ ಇದು ಲೇಸಲ್ಲ. ಆದ್ದರಿಂದ ಡಾಕ್ಟರರು ತಮ್ಮ ಉದ್ಯೋಗದ ಕಡೆಗೆ, ದೇಹಧರ್ಮದ ಕಡೆಗೆ ಕೇವಲ ಭೌತಿಕ ದೃಷ್ಟಿಯಿಂದ ನೋಡದೆ, ಆಧ್ಯಾತ್ಮಿಕ ದೃಷ್ಟಿಯಿಂದ ನೋಡಬೇಕು.



# ಒಕ್ಕಣ್ಣಿನ ವೈದ್ಯಶಾಸ್ತ್ರ



ಗಂಡಸರ ಸರಿಜೋಡಿ ಹೆಂಗಸರೂ ಕಾರ್ಯಾದಿಗಳಲ್ಲಿ ಭಾಗವಹಿಸದೆ ಯಾವ ವಿಷಯಜ್ಞಾನವೂ ಎಂದೂ ಪೂರ್ಣವಾಗಲಾರದು. ಇವರಿಬ್ಬರ ವಿಚಾರ ಸರಣಿಗಳು ಬೇರೆ ಬೇರೆ, ನೋಡುವ ದೃಷ್ಟಿಕೋನಗಳು ಬೇರೆ ಬೇರೆ, ಭಾವನೆಗಳು ಬೇರೆ ಬೇರೆ, ತೀರ್ಮಾನದ ಬಗೆಗಳೂ ಬೇರೆ; ಆದ್ದರಿಂದ ಆಯುಷ್ಯದ ಯಾವ ಯಾವ ಸಿದ್ಧಾಂತವೇ ಆಗಲಿ, ಅದರ ಅಂತವೇ ಆಗಲಿ ಪೂರ್ಣತ್ವವನ್ನು ಹೊಂದಬೇಕಾಗಿದ್ದರೆ, ಇಬ್ಬರ ವಿಚಾರ, ವಿಮರ್ಶೆ, ಪರಿಶೀಲನೆಗಳ ಸಮನ್ವಯವಾಗಲೇಬೇಕು. ದೇಹದ ಸುಸ್ಥಿತಿ- ದುಸ್ಥಿತಿಗಳಾಗಲಿ, ದೇಹದ ರಚನೆಯಾಗಲಿ, ಅವುಗಳಂತೆ ಧರ್ಮ, ನೀತಿ, ಕರ್ತವ್ಯಗಳಾಗಲಿ ಹೆಣ್ಮಕ್ಕಳವು ಗಂಡಸರವುಗಳಿಗಿಂತ ಎಳ್ಳಷ್ಟೂ ಭಿನ್ನವಾಗಿಲ್ಲ. ಆದ್ದರಿಂದ ಒಬ್ಬರ ಸಲುವಾಗಿ ಬೇರೆಯವರು ಮಾಡಿದ ಯೋಜನೆ, ನಿಯಮ, ಧಾರ್ಮಿಕ ನೈತಿಕ ರಾಜಕೀಯ ಕಟ್ಟಳೆಗಳು ಯಾವ ಪ್ರಯೋಜನಕ್ಕೂ ಬಾರವು. ಗಂಡಸರೂ ಹೆಂಗಸರೂ ಪ್ರತ್ಯೇಕವಾಗಿ ಆಯುಷ್ಯದ ಪ್ರತಿಯೊಂದು ಶಾಖೆಯ ಕಟ್ಟಳೆಗಳನ್ನೇ ಕಟ್ಟುವದು ಅಗತ್ಯವಾಗಿದೆ. ಗಂಡಸರು ಹಾಕಿಕೊಟ್ಟಂಥ ಧಾರ್ಮಿಕ, ನೈತಿಕ, ವ್ಯವಹಾರಿಕ, ವೈದ್ಯಕ ಮೊದಲಾದ ಕಟ್ಟಳೆಗಳಂತೆ ಹೆಂಗಸರು ನಡೆಯುವದು ತಪ್ಪು. ಆದರೆ ಆಯುಷ್ಯದ ಪ್ರತಿಯೊಂದು ಸಮಸ್ಯೆಯನ್ನು ತಮ್ಮಷ್ಟಕ್ಕೆ ತಾವೇ ಬಿಡಿಸಬಲ್ಲೆವೆಂಬ ಅರಿವು ಹೆಣ್ಣುಮಕ್ಕಳು ಗಂಡಸರನ್ನು ನಂಬಿ ಅವಲಂಬಿಸಿರುವರು. ಇತ್ತಿತ್ತಲಾಗಿ ಅವರು ವಿವಿಧ ರೀತಿಯಾಗಿ ಪ್ರಗತಿಯನ್ನು ಹೊಂದಿದ್ದೇನೋ ನಿಜ. ಆದರೂ ಅವರು ಮಾಡತಕ್ಕದ್ದು ಇನ್ನೂ ಬಹಳವಿದೆ. ಹೆಣ್ಣುಮಕ್ಕಳು ಈವತ್ತಿನವರೆಗೂ ಜಗತ್ತಿನ ಕಡೆ

ಗಾಗಲಿ ಸ್ವತಃ ತಮ್ಮ ಕಡೆಗಾಗಲಿ ಗಂಡಸರ ದೃಷ್ಟಿಯಿಂದಲೇ ನೋಡಿ ದ್ದರಿಂದ- ನೋಡುತ್ತಿರುವದರಿಂದ ಅವರಲ್ಲಿ ಆತ್ಮವಿಶ್ವಾಸವು ಸಾಕಷ್ಟು ಬೆಳೆದಿರುವದಿಲ್ಲ. ಗಂಡಸರಂತೆ ತಾವೂ ಆತ್ಮವಿಶ್ವಾಸವುಳ್ಳವರಾಗಬೇ ಕಾದರೆ, ಸೃಷ್ಟಿಯ ಎಲ್ಲ ಅಂಗಗಳಿಗೂ ತಮ್ಮ ಧರ್ಮ, ಬುದ್ಧಿ, ದೇಹ ಧರ್ಮ ಇವುಗಳ ಸಂಬಂಧವು ಹೇಗಿರುವದೆಂಬದನ್ನು ಗಂಡಸರಂತೆ ಹೆಂಗಸರು ತಾವೇ ಕಂಡುಹಿಡಿಯಬೇಕು. ಗಂಡಸರು ತಿಳಿಯುವ, ಮಾಡುವ, ಕಾಣುವ ಯಾವ ವಿಷಯವೂ ಹೆಂಗಸರಿಗೆ ಅಸಾಧ್ಯವಾಗಿರು ವದಿಲ್ಲ. ಪ್ರತಿಯೊಂದು ಸಂಗತಿಯನ್ನು ನಿರ್ಣಯಿಸುವ ಸ್ತ್ರೀಯರ ವಿಶಿಷ್ಟ ಶಕ್ತಿಗಳೇ ಬೇರೆ ಪ್ರಕಾರದವಿರುವವು. ಇವುಗಳ ಉಪಯೋಗವನ್ನು ಹೆಂಗಸು ಮಾಡಿಕೊಳ್ಳುವವರೆಗೆ ಇಡೀ ಜಗತ್ತಿನ ಜ್ಞಾನವು ಅರಕಳಿಯಾ ಗಿಯೇ ಉಳಿಯುವದು. ಏಕೆಂದರೆ ಅದು ಗಂಡಸಿನ ದೃಷ್ಟಿಯಿಂದ ಮಾತ್ರ ಎಂದರೆ ಒಕ್ಕಣ್ಣಿನಿಂದ ಕಂಡುಕೊಂಡ ಜ್ಞಾನವಾಗಿರುವದು.

ವೈದ್ಯಶಾಸ್ತ್ರದ ಅಭ್ಯಾಸವನ್ನು ಸಾಂಗೋಪಾಂಗವಾಗಿ ಗಂಡಸರೇ ಮಾಡಬಾರದೆಂಬ ಅಭಿಪ್ರಾಯವು ಜನರಲ್ಲಿ ಹರಡಿರುವಾಗ, ಹೆಣ್ಣು ಮಕ್ಕಳು ಅದನ್ನು ಮಾಡಿದರೆ 'ಶಾಂತಂ ಪಾಪಂ' 'ಅಬ್ರಹ್ಮಣಂ' ಎಂದು ಜನರು ತಿಳಿಯುವದರಲ್ಲಿ ಏನಾಶ್ಚರ್ಯ. ಹೆಣ್ಣುಮಕ್ಕಳ ಜೀವನದ ಧ್ಯೇಯ ವೇ ಪಾವಿತ್ರ್ಯ, ಪ್ರಪಂಚ, ಧರ್ಮ, ಪ್ರೇಮ, ಸೌಂದರ್ಯ, ಸೌಭಾಗ್ಯ ಇವುಗಳ ಮಟ್ಟಿಗೆ ಮಾತ್ರ ಮರ್ಯಾದಿತವಾದದ್ದೆಂಬ ಭಾವನೆ ಸಮಾಜ ದಲ್ಲಿ ಮನೆಮಾಡಿದ್ದರಿಂದ ಅವರ ಸ್ವಭಾವಕ್ಕೆ ತೀರ ವಿಪರೀತವಾದದ್ದೆಂದು ಎಣಿಸಲ್ಪಡುವ ವೈದ್ಯಶಾಸ್ತ್ರದ ಅಭ್ಯಾಸವನ್ನು ಅವರಿಗೆಂತು ಮಾಡಗೊ ಡುವರು ? ಯಾವ ಯುಗದಲ್ಲಿ ನೋಡಿದರೂ ಯಾವ ದೇಶದಲ್ಲಿ ನೋಡಿ ದರೂ ಹೆಣ್ಣುಮಕ್ಕಳ ವಿಕಾಸಕ್ಕೆ ಗಂಡಸರೇ ಆತಂಕವಾಗಿರುವರು. ಘೋ ಷಾಪದ್ಧತಿ, ಸಂಕುಚಿತ ಆಚಾರ ವಿಚಾರಗಳು, ಬಾಲವಿವಾಹ ರೂಢಿ ಶರ ಣತೆ ಇವುಗಳೇ ಅವರ ವಿಕಾಸಕ್ಕೆ ಹಗೆಯಾಗಿರುವವು. ಸಾರಾಂಶವೇ ನೆಂದರೆ, ಹೆಂಗಸಿನ ಸದ್ಗುಣಗಳೆಂದು ಎಣಿಸಲ್ಪಡುವ ನಿರುಪದ್ರವಿತ್ವ, ಪಾವಿತ್ರ್ಯ ಪಾತಿವ್ರತ್ಯ, ಬ್ರಹ್ಮಚರ್ಯ, ಸುಕೋಮಲತ್ವ ಇತ್ಯಾದಿಗಳೇ ಒಂದರ್ಥದಲ್ಲಿ ಅವರ ಅಜ್ಞಾನ, ರೋಗ, ದುಃಖ, ವಿಕೃತಾವಸ್ಥೆ ಇತ್ಯಾದಿ

ಗಳೆಂದು ಹೇಳಬಹುದು. ನೈತಿಕವೆಂದು ಭಾವಿಸಲ್ಪಡುವ ಆದರೆ ಅತ್ಯಂತ ಶೋಚನೀಯವಾದ ಈ ಸ್ಥಿತಿಯು ಹೀಗೆಯೇ ಇನ್ನೆಷ್ಟು ಕಾಲ ಅವರಿಗೆ ಉರುಲಾಗಿ ಬಿಗಿಯುತ್ತಿರಬೇಕೋ ಭಗವಂತನೇ ಬಲ್ಲ!

ಈ ಬಗೆಯ ಆಕುಂಚಿತ ದೃಷ್ಟಿಯ ಭಾವನೆ ಕಲ್ಪನೆಗಳು ಪ್ರಕೃತಿಗೆ-ಸೃಷ್ಟಿಧರ್ಮಕ್ಕೆ ಅಸಹನೀಯವಾದವು. ಅದು ಯಾವಾಗಲೂ ನ್ಯಾಯ ದೃಷ್ಟಿಯಿಂದ ನೋಡುವದು, ಅದು ಅನ್ಯಾಯಕ್ಕೆ ಶಿಕ್ಷೆಯನ್ನು ವಿಧಿಸಿ, ಮಾನವನನ್ನು ಬೇರೆ ದುಃಖಗಳನ್ನು ಅನುಭವಿಸಲು ಹಚ್ಚಿ ಬುದ್ಧಿಗಲಿಸುತ್ತಿರುವದು. ಮತ್ತು ಮಾನವನು ಒಕ್ಕಣ್ಣಿನಿಂದ ಕಲ್ಪಿಸಿರುವ ನೈತಿಕ ಧಾರ್ಮಿಕ ವಿಧಿವಿಧಾನಗಳನ್ನು ಬುಡಮೇಲು ಮಾಡುತ್ತಿರುವದು. ಇದರಿಂದ ಗಂಡಸರಿಗಷ್ಟೇ ನಷ್ಟವಾಗಿರುವದಲ್ಲ, ಹೆಂಗಸರಿಗೂ ಹೇಳಲು ಬಾರದಷ್ಟು ನಷ್ಟವುಂಟಾಗಿರುವದು ತಪ್ಪಿಹೋದ ಈ ತೂಕ( balance ) ವನ್ನು ಸರಿಪಡಿಸುವದಕ್ಕೆ ಹಂಗಸರು ವೈದ್ಯಶಾಸ್ತ್ರದ ಅಭ್ಯಾಸಮಾಡುವದು ಅಗತ್ಯ. ಇದರ ಅಭಾವದಿಂದಲೇ ಮಾನವ ಜನಾಂಗವು ಇಷ್ಟು ದುಃಖಮಯವಾಗಿರುವದು! ಸ್ತ್ರೀಯರಿಗೂ ಬಾಲಕರಿಗೂ ಉಂಟಾಗುವ ರೋಗಗಳಿಂದ ಇಡೀ ಮಾನವ ಕುಟುಂಬವೇ ಬಳಲುತ್ತಿರುವದು! ಧರ್ಮ, ನೀತಿ, ಪಾವಿತ್ರ್ಯ, ನಾಚಿಕೆ, ಗೌಪ್ಯಮುಂತಾದ ಭಾವನೆಗಳಿಂದಲ್ಲವೇ ಹೆಂಗಸರು ಗುಹ್ಯರೋಗಗಳಿಂದ ಒಳಗೊಳಗೇ ನವೆಯುತ್ತಿರುವದು! ನಂದನವನದಂತೆ ಸೊಬಗಿನಿಂದೊಪ್ಪುವ, ಸೊಗಸಿನ ಕಣಿಯಾದ ಈ ದಿವ್ಯಜಗತ್ತಿನಲ್ಲಿ ಮಾನವಜಾತಿಯು ದುಃಖಿಏಕೆ? ಹೆಂಗಸರು ಅಜ್ಞಾನಿಗಳಾಗಿ ಉಳಿದುದಕ್ಕೆ!

ವೈದ್ಯಶಾಸ್ತ್ರವು ಗಂಡಸಿನಿಂದಾಗಲಿ ಹಂಗಸಿನಿಂದಾಗಲಿ ತನ್ನ ಅಭ್ಯಾಸವನ್ನು ಅಪೇಕ್ಷಿಸುವುದು ಕೇವಲ ತಾತ್ಪೂರ್ತಿಕ ಉಪಾಯವೆಂದಲ್ಲ. ಅದನ್ನು ಅಭ್ಯಾಸಿಸುವದು ಹೆಂಗಸರ ಹಕ್ಕೆಂದಲ್ಲ, ಅದವರ ಕರ್ತವ್ಯವು. ಈ ಕರ್ತವ್ಯವನ್ನು ಯಾರು ಪಾಲಿಸಲಿ ಯಾರು ಪಾಲಿಸದಿರಲಿ, ಪ್ರಕೃತಿಯು ಮಾತ್ರ ತನ್ನ ಕಟ್ಟಳೆಗಳನ್ನು ಉಲ್ಲಂಘಿಸುವವರಿಗೆ ತಕ್ಕ ಶಾಸನ ಮಾಡದೆ ಬಿಡುವದಿಲ್ಲ. ತನ್ನ ಹಾಗು ತನ್ನ ಕಟ್ಟಳೆಗಳ ಅಭ್ಯಾಸವನ್ನು ಗಂಡಸು, ಹೆಂಗಸು ಎಲ್ಲರೂ ಧರ್ಮವೆಂದು, ಕರ್ತವ್ಯವೆಂದು ಮಾಡಲೇಬೇಕೆಂದು ಪ್ರಕೃತಿಯ ಕಟ್ಟಪ್ಪಣೆಯಾಗಿರುವದು; ಈ ಅಭ್ಯಾಸ

ವನ್ನು ಮಾಡದಿದ್ದ ಬಹುಜನ ಗಂಡಸರೂ ಎಲ್ಲ ಹೆಂಗಸರೂ ಪಾಪವನ್ನು ಆಚರಿಸುತ್ತಿರುವರು, ಮತ್ತು ಪ್ರಕೃತಿಯ ಶಿಕ್ಷೆಗೆ ಗುರಿಯಾಗುತ್ತಿರುವರು ಪ್ರಕೃತಿ ಧರ್ಮದ ಬಗ್ಗೆ ಸ್ತ್ರೀಯರಿಗಿರುವ ಅಜ್ಞಾನವು ಗಂಡಸರಿಗಿರುವ ಅಜ್ಞಾನಕ್ಕಿಂತ ಅಣುಮಾತ್ರವೂ ಕಡಿಮೆಯ ಅಪರಾಧವಲ್ಲ. ಹೆಂಗಸರು ಅಬಲೆಯರು, ಕೋಮಲೆಯರು ಮತ್ತು ತಿಳಿಯದೆ ನನ್ನ ಕಟ್ಟಳೆಗಳನ್ನು ಮೀರಿದರು ಎಂದು ಪ್ರಕೃತಿಯು ಅವರನ್ನು ಕ್ಷಮಿಸಲಾರದು. ಅಲ್ಲಿ ಸ್ತ್ರೀ ದಾಕ್ಷಿಣ್ಯ, ಸ್ತ್ರೀ ಗೌರವ ಎಂಬ ಪಕ್ಷಪಾತವಿಲ್ಲ. ಪ್ರಕೃತಿಯು ಗಂಡಸರಂತೆ ಬಾಯಿಮಾತಿನಲ್ಲಿ ಅವರಿಗಾಗಿ ಸಹಾನುಭೂತಿಯನ್ನು ತೋರಿಸುತ್ತ ತನ್ನ ಅಂತಃಕರಣದ ನಿಜವಾದ ಗುಟ್ಟನ್ನು ಬಚ್ಚಿಡಲಾರದು ಗಂಡಸರು ಹೆಂಗಸರು ಎಂಬ ಭೇದಭಾವನೆಯಿಲ್ಲದೆ, ಯಾರು ಬೇಕಾದರೂ ನೋಡಿಕೊಳ್ಳಲು ತನ್ನ ಅಂತಃಕರಣವನ್ನು ತೆರೆದಿಟ್ಟಿರುವದು.

ಸ್ತ್ರೀಯರಲ್ಲಿ ಕಂಡುಬರುವ ಅಜ್ಞಾನದ ಮೂಲಕ, ಅದರ ಬಗ್ಗಿರುವ ಅನಾದರಣೆಯ ಮೂಲಕ ಉಂಟಾಗುವ ದುಷ್ಪರಿಣಾಮಗಳು ಪುರುಷರಲ್ಲಿ ಕಂಡುಬರುವ ದುಷ್ಪರಿಣಾಮಗಳಿಗಿಂತ ಹೆಚ್ಚು ಘಾತಕವಾಗಿರುವವು. ತಮ್ಮ ಆರೋಗ್ಯದ ವಿಷಯದಲ್ಲಿ ಕೂಡ ಹೆಂಗಸರಿಗೆ ಅಜ್ಞಾನ ತಾತ್ಸಾರಗಳಿರುವದು ಯಾರಿಗೆ ಗೊತ್ತಿಲ್ಲ? ಇದರಿಂದ ಅವರ ರೋಗ ಚಿಕಿತ್ಸೆ ಮಾಡುವಾಗ ನಿರುತ್ಸಾಹಿಯಾಗುವ ಪ್ರಸಂಗ ಬರುವದೆಂಬದು ಡಾಕ್ಟರರಿಗೆ ಗೊತ್ತಿರಲಿಕ್ಕೆ ಸಾಕು. ಮೃತ್ಯು ಸನ್ನಿಹಿತವಾದಾಗಲಾದರೂ ಗಂಡಸರನ್ನು ತಮ್ಮ ಆರೋಗ್ಯದ ಕಡಗ ಲಕ್ಷ್ಯಕೊಡಲು ಹಚ್ಚಬಹುದು, ಆದರೆ ಹೆಂಗಸರನ್ನು ಹಾಗೆ ಮಾಡಲು ಹಚ್ಚುವದಾಗಲಿ ಶತಪ್ರಯತ್ನದಿಂದಲೂ ಅಸಾಧ್ಯವೆಂದು ಹೇಳಬಹುದು. ಇಷ್ಟೇ ಅಲ್ಲ, ಜೀವಿತಕ್ಕೆ ಸಂಬಂಧಿಸಿದ ಎಲ್ಲ ವಿಷಯಗಳ ಬಗ್ಗೆಯೂ ತಮಗಾಗಿ ಮಾಡಬೇಕಾದ ಕರ್ತವ್ಯಗಳ ಕಲ್ಪನೆಯೇ ಇಲ್ಲದಿರುವದು ಹೆಂಗಸರ ವೈಶಿಷ್ಟ್ಯವಾಗಿದೆ. ಅದನ್ನು ನೀವು ಸ್ವಾರ್ಥತ್ಯಾಗವೆಂದು ಮೋಸಗೊಳಿಸುವಂಥ ಶಬ್ದದಿಂದ ಬೇಕಾದರೆ ಹೊಗಳಬಹುದು. ಪ್ರಕೃತಿ ಧರ್ಮದ ಇಷ್ಟಕ್ಕಿಂತಲೂ ಅವರು ಗಂಡಸರ ಇಷ್ಟವೇ ತಮ್ಮ ಧರ್ಮವೆಂದು ತಿಳಿದು, ತಮ್ಮ ಕರ್ತವ್ಯವನ್ನು ಕುರಿತಾಗಲಿ ಧರ್ಮವನ್ನು ಕುರಿತಾಗಲಿ ಕಿಂಚಿನ್ಮಾತ್ರವೂ ವಿಚಾರ ಮಾಡದೆ ಬಗ್ಗಿ

ಕೊಂಡು ವಡೆಯುತ್ತಿರುವರು. ಹೆಂಗಸರು ಜ್ಞಾನ, ಆರೋಗ್ಯ, ಸ್ವತಂತ್ರವಿಚಾರ ಇವುಗಳನ್ನೆಲ್ಲ ಕಡೆಗಣಿಸಿ "ದೇವರ ಸಲುವಾಗಿ ಗಂಡಸರು ಹುಟ್ಟಿದ್ದಾರೆ, ಗಂಡಿನಲ್ಲಿ ದೇವರನ್ನು ಕಾಣಲು ಹೆಂಗಸರು ಹುಟ್ಟಿದ್ದಾರೆಂ'" ಬ ಅಡ್ಡದಾರಿಗೊಯ್ಯುವಂಥ ಕವಿಗಳುಕ್ತಿಯನ್ನು ಅಂಗೀಕರಿಸಿದ್ದಾರೆ. ಇಡೀ ಮಾನವೇತರ ಪ್ರಾಣಿಗಳಲ್ಲಿ ಹೆಣ್ಣಿಗಾಗಿ ಕಾದಿಟ್ಟ ಸ್ಥಾನಮಾನಗಳು ಮಾನವ ಜಾತಿಯ ಹೆಣ್ಣಿಗಾದರೂ ಇರತಕ್ಕದ್ದು ಅತ್ಯಗತ್ಯವು ಮತ್ತು ನ್ಯಾಯವು. ಇದನ್ನು ಅಲಕ್ಷಿಸಿ ಹೆಂಗಸು ತನ್ನ ಮಾನಾಪಮಾನಗಳನ್ನು—ಅಲ್ಲ, ಅಸ್ತಿತ್ವವನ್ನೇ—ಮರೆತು ಗಂಡಸಿನಲ್ಲಿಯೇ ಬೆರೆತು ಹೋಗಬೇಕೆಂದು ಅಪೇಕ್ಷಿಸುತ್ತಿರುವದು ಪ್ರಕೃತಿಧರ್ಮಕ್ಕೆ ತೀರಾ ವಿಪರೀತವಾದದ್ದು. ಆದ್ದರಿಂದ ಹೀಗೆ ನಡೆಯುವದರಿಂದ ಹೆಂಗನೇ ದುಃಖಕ್ಕೆ ಗುರಿಯಾಗಿದ್ದಾಳೆ ಅವಳು ದುಃಖಿಯಾಗಿದ್ದರೆ ಗಂಡಸು ಹೇಗೆ ಸುಖಿಯಾಗಬಲ್ಲನು ? ಮತ್ತು ಅವನಿಗೆ ತನ್ನ ದಾಸಿಯಾದ ಹೆಂಗಸಿನಿಂದ ತಕ್ಕ ಮರ್ಯಾದೆ, ಪ್ರೇಮ, ಆದರಗಳು ಸಿಕ್ಕಬಹುದೇ ? ಸಾಧ್ಯವಿಲ್ಲ! ದಾಸ್ಯದಿಂದ ಸಿಗತಕ್ಕ ಮಾನಮರ್ಯಾದೆ ಪ್ರೇಮ ಇವುಗಳು ಗಂಡಸಿನ ಘನತೆತೆಗಾದರೂ ಒಪ್ಪಿಯಾವೇ ? ನಿಜವಾಗಿ ಹೆಂಗಸು ಪ್ರಕೃತಿ ಧರ್ಮವನ್ನು—ಗಂಡಸಿನೊಡನೆ ತನ್ನ ಸಂಬಂಧವೇನು, ತನ್ನ ಕರ್ತವ್ಯಗಳಾವವು ಮುಂತಾದ ವಿಷಯಗಳನ್ನು—ಅಭ್ಯಾಸಿಸಿದ ಹೊರತು ಜಗತ್ತು ಸುಖಿಯಾಗಲಾರದು. ಆದ್ದರಿಂದ ಗಂಡಸಿಗಾಗಿ ಹೆಂಗಸು ಪ್ರಕೃತಿಧರ್ಮವನ್ನು ಅಲಕ್ಷಿಸಲಾಗದು. ಪ್ರಕೃತಿಯು ಹೆಂಗಸಿನ ಪ್ರೇಮವನ್ನು ಅಪೇಕ್ಷಿಸುವದು. ಆದರೆ ಆ ಸ್ತ್ರೀ ಪ್ರೇಮವನ್ನು ಗಂಡಸು ಕೊಡಬಲ್ಲನೊ ? ತಪ್ಪುಗಳಿಗಾಗಿ ಅವಳು ಅನುಭವಿಸಬೇಕಾಗುವ ಶಿಕ್ಷೆಗಳನ್ನು ಅವಳಿಗಾಗಿ ಅವನು ಅನುಭವಿಸುವನೋ ? ಅವಳ ಬಾಳನ್ನು ಅವನು ಬಾಳಬಲ್ಲನೋ ? ಅವಳ ಸಾವನ್ನು ತಾನು ಕೋರಬಲ್ಲನೋ ?

ಹೆಂಗಸಿಗೆ ನಿಜವಾಗಿಯೂ ಪ್ರಕೃತಿಧರ್ಮವು ಸೇರುತ್ತಿದ್ದರೆ ಅವಳು ಅದರ ಮತ್ತು ನೀತಿಧರ್ಮದ ಸತ್ಯಸ್ವರೂಪವನ್ನು ಅರಿತುಕೊಳ್ಳದೆ ಎಂದೂ ಬಿಡುತ್ತಿರಲಿಲ್ಲ; ಬಿಡುವದು ಅಶಕ್ಯವೇ ಆಗುತ್ತಿತ್ತು. ಅವಳು ಅಜ್ಞಾನಿಯಾಗಿರುತ್ತಿರಲಾಗಿ, ಗಂಡಸಿನ ಜ್ಞಾನವೂ ಅವನ ಪರಾಕ್ರಮವೂ ಅವನ

ಚಾತುರ್ಯವೂ ಅವನ ಕಟ್ಟಳೆಗಳೂ ಹೆಂಗಸನ್ನು ಭವಸಾಗರದಿಂದ ಯಾವ ರೀತಿಯಿಂದಲೂ ದಾಟಿಸಲಾರವು. 'ಉದ್ಧರೇದಾತ್ಮನಾತ್ಮಾನಂ ನಾತ್ಮಾನಮವಸಾದಯೇತ್' ಎಂಬ ಸೂತ್ರವು ಕೇವಲ ಗಂಡಸಿಗೆ ಅನ್ವಯಿಸುವದು, ಹೆಂಗಸಿಗಲ್ಲ ಎಂಬದು ತಿಳಿಗೇಡಿತನವು. ಹೆಂಗುಸೆಂದರೆ ನಿರ್ಜೀವವಾದೊಂದು ಯಂತ್ರವಲ್ಲ; ಅವಳಿಗೂ ಬುದ್ಧಿಯಿದೆ, ತಿಳಿವಳಿಕೆಯಿದೆ, ಸುಖದುಃಖಗಳಿವೆ. ಆದ್ದರಿಂದ ಪರಪ್ರತ್ಯಯನೇಯ ಬುದ್ಧಿಯು ಅವಳಿಗೆ ಎಳ್ಳಷ್ಟೂ ಪ್ರಯೋಜನಕಾರಿಯಲ್ಲ. ಅನ್ಯರು ಅವಳನ್ನು ಸ್ವೇಚ್ಛೆಯಂತೆ ಪಡಿಯಚ್ಚಿನಲ್ಲಿ ಹಾಕಿ ಸಿದ್ಧಗೊಳಿಸಲು ಶಕ್ಯವಿಲ್ಲ ಅವಳು ಹೆಜ್ಜೆಹೆಜ್ಜೆಗೂ ಕ್ಷಣಕ್ಷಣಕ್ಕೂ ತನ್ನ ಸಮಸ್ಯೆಗಳನ್ನು ತಾನೇ ಬಿಡಿಸಿಕೊಳ್ಳಬೇಕಾಗುವದು. ಈಗ ಇಷ್ಟೊಂದು ಬೆಳೆದು ನಿಂತಿರುವ ಶಾಸ್ತ್ರಗಳು, ಕಲೆಗಳು, ವಿಜ್ಞಾನಗಳು ಇನ್ನೂ ಅಪೂರ್ಣವಾಗಿಯೇ ಉಳಿದಿರುವವು; ಪೂರ್ಣತ್ವವನ್ನು ಹೊಂದುವದಕ್ಕಾಗಿ ಅವು ಹೆಂಗಸಿನ ಸ್ಪರ್ಶದ ದಾರಿಕಾಯುತ್ತಲಿವೆ. ಅದರಲ್ಲಿಯೂ ವೈದ್ಯಶಾಸ್ತ್ರವು ಅವಳ ಸಹಾಯವಿಲ್ಲದೆ ಕುಂಟಾಗಿರುವದು. ಏಕೆಂದರೆ ದೇಹರಚನೆ, ಆರೋಗ್ಯ, ಆಚಾರ ವಿಚಾರ, ಸುಖದುಃಖಗಳು ಇವೆಲ್ಲ ಗಂಡಸಿನವೂ ಹೆಂಗಸಿನವೂ ಬೇರೆಯಾಗಿರುವದರಿಂದ, ಇಬ್ಬರಿಗಾಗಿಯೂ ಒಂದೇ ಸಿದ್ಧಾಂತವನ್ನು ಹೇಳುವ ಶಾಸ್ತ್ರವು ಅದೆಷ್ಟು ದೋಷಪೂರ್ಣವಾದುದೆಂದು ಬೇರೆ ಹೇಳಬೇಕಾಗಿಲ್ಲ. ಹೆಂಗಸಿನ ಶಾರೀರಿಕ ಮಾನಸಿಕ ವಿಷಯಗಳು ಗಂಡು ಡಾಕ್ಟರನಿಗೆ ತಿಳಿಯುವದೇ ಸಾಧ್ಯವಿಲ್ಲ; ಅವು ಬಹಳ ಗೂಢವಾಗಿರುವವು. ಸರಿಯಾದ ಶಿಕ್ಷಣವನ್ನು ಹೊಂದಿದಲ್ಲಿ ಹೆಂಗಸು ತಾನೇ ತನ್ನ ಗೂಢವನ್ನು ಬಿಚ್ಚಿಡಬಲ್ಲಳು; ತಿಳಿಸಬಲ್ಲಳು. ಕೆಟ್ಟಿದ್ದನ್ನು ಸರಿಪಡಿಸಬಲ್ಲಳು. ತನ್ನ ಗೂಢವನ್ನು ಬಿಚ್ಚಿಡುವದಕ್ಕಾಗಲಿ, ತನ್ನ ರೋಗನಿವಾರಣೆಗಾಗಲಿ ಅವಳು ಗಂಡಸನ್ನು ಅವಲಂಬಿಸುವದೆಂದರೆ ಸತ್ವಹೀನವಾದ ಬಳ್ಳಿಗೆ ಜೋತುಬಿದ್ದಂತೆಯೇ ಸರಿ. ಗಂಡಸೇ ಆಗಲಿ ಹೆಂಗಸೇ ಆಗಲಿ, ಡಾಕ್ಟರರಿಂದ ತಮ್ಮ ಬೇನೆಗಳು ಅಳಿಯುವವೆಂದೂ ಔಷಧಗಳಿಂದ ಆರೋಗ್ಯವು ಲಭಿಸುವದೆಂದೂ ಬಗೆಯುವದು ಮೂಢತನವು. ಡಾಕ್ಟರರೊಡನೆ ರೋಗಿಯ ಸಹಕಾರವಿಲ್ಲದೆ ಆರೋಗ್ಯಲಾಭವಿಲ್ಲ. ಆರೋಗ್ಯವನ್ನು ಪಡೆಯಲು ಮತ್ತು ಕಾಯ್ದುಕೊಳ್ಳಲು ಪ್ರತಿಯೊಬ್ಬನಿಗೆ ಸ್ವಪ್ರಯತ್ನವು ಅತ್ಯಂತ ಅಗತ್ಯವಾಗಿದೆ. ಮನುಷ್ಯನ

ಬುದ್ಧಿ—ಪ್ರಯತ್ನಗಳು ದೇಹಧರ್ಮದೊಡನೆ ಸಹಕರಿಸಬೇಕು. ಎಲ್ಲ ಹೊರೆಯನ್ನೂ ಡಾಕ್ಟರರ ಮೇಲೆ ಹೊರಿಸುವದರಿಂದ ಬಹಳ ಅನರ್ಥಗಳುಂಟಾಗುವವು. ನ್ಯಾಯವಾವದು, ಹಿತವಾವದು, ಸತ್ಯವಾವದು ಎಂಬುದನ್ನು ಕಂಡುಕೊಳ್ಳಲು ಸ್ತ್ರೀ-ಪುರುಷರಿಬ್ಬರ ವಿಚಾರಗಳೂ ಕೂಡಿಯೇ ಕೆಲಸ ಮಾಡಬೇಕು. ಪ್ರತಿಯೊಂದು ವಿಷಯದ ಬಗ್ಗೆಯೂ ಇಬ್ಬರೂ ವಿಚಾರವಿನಿಮಯ, ಚರ್ಚೆ ನಡೆಸಬೇಕು. ಇಬ್ಬರ ವಿಚಾರ ಸಹಕಾರದಿಂದ ಹೊರಟ ನಿರ್ಣಯದಿಂದ ಇಬ್ಬರಿಗೂ ಹಿತವುಂಟು.

ಆದರೆ ಈವೊತ್ತಿನವರೆಗ ಹೆಂಗಸು ಹೇಗಿರಬೇಕು, ಅವಳ ಉಡುವು ತೊಡುವು ಎಂಥವಿರಬೇಕು, ಅವಳ ತಿಂಡಿತಿನಿಸುಗಳು ಯಾವವು, ಅವಳ ಆಚಾರ ವಿಚಾರಗಳು ಎಂತಿರಬೇಕು, ಅವಳ ರೀತಿ ನಡತೆಗಳ ಹಾದಿಯಾವದು—ಒಟ್ಟಾರ ಅವಳ ಸಂಪೂರ್ಣ ಜೀವನವು ಹೇಗೆ ನಡೆಯಬೇಕು ಮತ್ತು ಅವಳ ಜೀವನದ ಧ್ಯೇಯವಾವದು—ಇವೆಲ್ಲವನ್ನೂ ಗಂಡನೇ ತನಗೆ ಹೊಳೆದಂತೆ—ಗೊತ್ತುಪಡಿಸುತ್ತ ಬಂದಿರುವನು, ಅದಕ್ಕನುಸಾರವಾಗಿ ಅವಳನ್ನು ನಡಿಯ ಹಚ್ಚಿರುವನು. ವೈದ್ಯಶಾಸ್ತ್ರದಲ್ಲಿ ಕೂಡ ಹೆಂಗಸಿನ ರೋಗ ಆರೋಗ್ಯ ಮುಂತಾದ ವಿಷಯಗಳನ್ನು ಗಂಡನೇ ವಿಚಾರಿಸುತ್ತಿರುವರು. ವೈದ್ಯಶಾಸ್ತ್ರಕ್ಕೆ ಹೆಂಗಸಿನ ದೃಷ್ಟಿಕೋನ ವಿಚಾರಸರಣಿಗಳ ನೆರವು ಸಿಗದಿದ್ದದರಿಂದ ಹೆಂಗಸು ನಷ್ಟಕ್ಕೆ ಗುರಿಯಾಗಿರುವಳಲ್ಲದೆ, ಗಂಡಸಿಗೆ ಒದಗಿದ ನಷ್ಟವನ್ನು ಅವನು ಅರಿಯನು. ನೈತಿಕ ಕ್ಷೇತ್ರದಲ್ಲಿ ಹೆಂಗಸಿಗೆ ಅಸ್ತಿತ್ವವೇ ಇರುವದಿಲ್ಲ. ಅವಳು ಅಜ್ಞಳಿರುವದರಿಂದ ಗಂಡಸು ಹೇಗೆ ನಡೆದುಕೊಳ್ಳಬೇಕೆಂಬ ಬಗ್ಗೆ ಅವಳು ಪಡುವ ಅಭಿಪ್ರಾಯಕ್ಕೆ ಬೆಲೆಯೇ ಇಲ್ಲವಾಗಿದೆ; ಆ ವಿಷಯವನ್ನು ನಿರ್ಣಯಿಸುವುದರಲ್ಲಿ ಅವಳಿಗೆ ಅಧಿಕಾರವೇ ಇಲ್ಲ. ಏಕೆಂದರೆ ಅವಳು ಪಡುವ ಅಭಿಪ್ರಾಯವು ಇಲ್ಲವೆ ಕೊಡುವ ನಿರ್ಣಯವು ಅವಳ ನಿರೀಕ್ಷಣೆಯಿಂದ ಆಂತರ್ಯದವಿಚಾರದಿಂದ ಹೊರಟಿರದೆ, ಅದು ಅವಳ ಮೇಲೆ ಉಂಟಾದ ಲೋಕರೂಢಿಯ ಪರಿಣಾಮದ ಅಥವಾ ಅವಳ ಲಹರಿಯ ಫಲವಾಗಿದೆ.

ನೈತಿಕ ಕ್ಷೇತ್ರದಲ್ಲಿಗಿಂತಲೂ ವೈದ್ಯಶಾಸ್ತ್ರದಲ್ಲಿ ಹೆಂಗಸಿನ ಸಹಕಾರವು ಹೆಚ್ಚು ಅಗತ್ಯದ್ದಾಗಿದೆ. ಅವಳು ಇದರಲ್ಲಿ ಸೇರಿ ತನ್ನ ತೀಕ್ಷ್ಣಬುದ್ಧಿಯ

ಬೆಳಕನ್ನು ನಮ್ಮ ಶೋಧನೆಗಳಲ್ಲಿ ತೋರದಿದ್ದರೆ ಭಿನ್ನಲಿಂಗಿಗಳಿಂದೊಡ ಗೂಡಿದ ಮಾನವ ಜಾತಿಯು ಪೂರ್ಣತ್ವವನ್ನು ಹೊಂದಲಾರದು. ಹೆಂಗಸು ಈತೆರನಾದ ಮಹತ್ವಾಕಾಂಕ್ಷೆಯನ್ನು ತಳೆಯಲಾರಳೆ! ನೆರೆಹೊರೆಯವರು ಜಡ್ಡಿನಿಂದ ಬಳಲುತ್ತಿರಲು, ಅದರಿಂದ ಅವಳ ಅಂತಃಕರಣವು ಕರಗುತ್ತಿ ರಲು, ಬರೀ ಕನಿಕರದ ಒಣಸಹಾನುಭೂತಿಯ ಹೊರತು ಹೆಚ್ಚಿನ ಸಹಾ ಯವನ್ನು ಮಾಡುವ ಉತ್ಕಂಠೆಯು ಅವಳಿಗ ಉಂಟಾಗಲಿಕ್ಕಿಲ್ಲವೇ? ಹಾಗೆ ಸಹಾಯಮಾಡಲು ಅವಳು ಸಮರ್ಥಳಾಗಲಿಕ್ಕಿಲ್ಲವೇ? ವಿಜ್ಞಾನವು ತನ್ನ ಸಹಾಯದ ವಿನಾ ಅಪೂರ್ಣವಾಗಿರುವಾಗ, ಅದು ತನ್ನ ಕೆಲವು ಸಮಸ್ಯೆಗಳನ್ನು ಬಿಡಿಸುವದಕ್ಕಾಗಿ ಅವಳ ಹಾದಿ ಕಾಯುತ್ತಿರುವಾಗ, ಅದಕ್ಕೆ ಕೈಕೊಡಲು ಪ್ರೇಮದ ಉತ್ಕಟತೆಯು ಅವಳನ್ನು ಪ್ರೇರಿಸುತ್ತಿರು ವದಿಲ್ಲವೇ? ಇಂದು ಕೆಲಜನರು ಮುಂದುವರಿಯುವ ಹೆಂಗಸನ್ನು ಹೀಯಾ ಳಿಸಬಹುದು, ನಾಳೆ ಅವರೇ ಹೊಗಳುವರು, ಮುಂದೆಬರುವಂತೆ ಪ್ರಾರ್ಥಿಸುವರು, ಎಂಬುದನ್ನು ತಿಳಿದು, ಇಡೀ ಮಾನವಜಾತಿಯ ಕಲ್ಯಾ ಣಕ್ಕಾಗಿ ಬಂದ ಎಡರುಗಳನ್ನೆಲ್ಲಾ ಎದುರಿಸಿ ದುಡಿಯುವ ದೃಢನಿಶ್ಚಯ ವನ್ನು ಅವಳು ಮಾಡಲಾರಳೇ? ಪ್ರತಿಯೊಂದು ವ್ಯಕ್ತಿಯಲ್ಲಿ-ಗಂಡಿನಲ್ಲಿ ಮಾತ್ರವಲ್ಲ, ಅಷ್ಟೇ ಹೆಣ್ಣಿನಲ್ಲಿ-ಸದ್ಗುಣದ ಝುರಿಯು, ಒಳ್ಳೆಯ ಕಾರ್ಯ ಮಾಡುವ ಹಂಬಲದ ಬಗ್ಗೆಯು ಹುಟ್ಟಿತ್ತಿರುತ್ತದೆಂಬದನ್ನು ಗಂಡಸು ಇನ್ನೂ ನಂಬಲಾರನೇ? ಈ ನಂಬಿಕೆಯಿಲ್ಲದೆ ತಾನು ಮೋಸ ಹೋಗಿ ನಷ್ಟಕ್ಕೆ ಗುರಿಯಾಗುವದನ್ನು ತಪ್ಪಿಸಲಾರನೆ?

ಬಹಳ ಶೋಚನೀಯವಾದ ಸಂಗತಿಯೆಂದರೆ, ಲೋಕದಲ್ಲಿ ಎಲ್ಲೋ ಕ್ವಚಿತ್ತಾಗಿ ಒಬ್ಬ ಹೆಂಗಸು ಸ್ವತಂತ್ರವಾದ ದಾರಿಯನ್ನು ನಡೆದು ಯಶಸ್ವಿ ಯಾಗಿರುವಳು. ಅವಳ ಸ್ವಾತಂತ್ರ್ಯಕ್ಕೆ ಎಡರುಗಳು ವಿಪರೀತ ಅವಳಿ ಗಿನ್ನೂ ಹೊಟ್ಟೆಬಟ್ಟೆ, ಮನೆಮಾರು ಮೊದಲಾದವುಗಳ ಮೋಹದಿಂದ ಪಾರಾಗುವಷ್ಟು ಯೋಗ್ಯತೆಯು ಬಂದಿಲ್ಲ. ಹೆಜ್ಜೆಹೆಜ್ಜೆಗೂ ನೀತಿ-ಅನೀತಿ, ಧರ್ಮ-ಅಧರ್ಮ ಇವುಗಳ ಕಟ್ಟಳೆಗಳು ಕಾಲ್ತೊಡಕಾಗುತ್ತಿರುವವು. ಅವು ಗಳನ್ನು ಕಳಚಿಕೊಂಡು, ಆಕೆಯು ತನ್ನಸ್ವತಂತ್ರಧ್ಯೇಯದ ಕಡೆಗೆ, ತನ್ನ ಉನ್ನತಿಯ ಕಡೆಗೆ ಹೋಗಲಾರಳು. ಅವಳಲ್ಲಿ ಒಳ್ಳೆಯ ಉತ್ಕಟ ಭಾವ

ನೆಗಳಿಂದ ಸ್ವಾಭಿಮಾನ ಸ್ವತಂತ್ರವೃತ್ತಿಗಳು ಚೇತರಿಸಿಕೊಂಡು ಮಿಂಚಿ ಹೋದ ಕೂಡಲೇ ಅವಳನ್ನು ಇಲ್ಲದ ಸಂಶಯಗಳೂ ಅನಿಶ್ಚಿತತೆಯೂ ಆವರಿಸುತ್ತವೆ. ಹಳೆಯ ಸಂಸ್ಕಾರಗಳಲ್ಲಿ ಬೆಳೆದಂಥ ಆ ಹೆಣ್ಣುಮಗಳು ಹೊಸದಾರಿಯಲ್ಲಿಯ ತೊಂದರೆಗಳಿಂದ ಭ್ರಾಂತಳಾಗಿ ಪಶ್ಚಾತ್ತಾಪಪಟ್ಟು ಮರಳಿ ಗತಾನುಗತಿಕಳಾಗುವಳು, ಅವಳ ನವಚೈತನ್ಯವೂ ಆಕಾಂಕ್ಷೆಗಳೂ ಗಾಳಿಗೋಪುರಗಳಂತೆ ಕ್ಷಣದಲ್ಲಿ ಮಾಯವಾಗುವವು. ಇಂಥ ಪರಿಸ್ಥಿತಿ ಯಲ್ಲಿ ಸ್ವತಂತ್ರ ವಿಚಾರಮಾಡುವ ಶಕ್ತಿಯು ಅವಳಲ್ಲಿ ಎಲ್ಲಿಂದ, ಹೇಗೆ ಬರಬೇಕು? ಹೊಸದೃಷ್ಟಿಯಲ್ಲಿ ಕಾಲಿಡುವ ಅಧಿಕಾರವು, ಹಕ್ಕು ತನ ಗುಂಟೆಂಬ ಭಾವನೆಯು ಅವಳಲ್ಲಿ ಹುಟ್ಟುವದೆಂದು? ತಾನು ಅಗತಿಗಳು, ತನ್ನಲ್ಲೇನೂ ಸತ್ವವಿಲ್ಲವೆಂಬ ಭಾವನಯ ಕಗ್ಗತಲೆಯಲ್ಲಿ ಹೊಸ ಚೈತ ನ್ಯವು ಅವಳಲ್ಲಿ ಏಕೆ ಬಂದೀತು ? 'ಮಾನವಜಾತಿಯ ಸೇವೆಯನ್ನು ಮಾಡ ಬೇಕೆಂಬ, ಹೊಸ ದಾರಿಯಿಂದ ತನ್ನ ಏಳಿಗೆಯನ್ನು ಹೊಂದಲೇಕೆಂಬ ಬಯಕೆಯು—ಬುದ್ಧಿಪ್ರಭಾವದ ಹಾಗೂ ಸದಂತಃಕರಣದ ಗೂಢ ಪ್ರೇರ ಣೆಯು—ಕೂಡ ಘೋರಪಾತಕವು! ನಮ್ರತೆಯೂ ಮೌನವಾದ ಕಷ್ಟಸಹಿ ಷ್ಣುತೆಯೂ ತನ್ನ ಹುಟ್ಟು ಗುಣಗಳು! ಪ್ರೇಮ ಮತ್ತು ಪುರುಷಸೇವೆ ಇವೆ ರಡೇ ತನ್ನ ಕರ್ತವ್ಯಗಳು! ಇದರಾಚೆ ತನ್ನ ಸ್ವತಂತ್ರಧ್ಯೇಯದ ಕಡೆಗೆ ನೋಡಲಾಗದು!' ಎಂಬ ಭಾವನೆಯು ಮತ್ತೆ ಅವಳಲ್ಲಿ ಮನೆಮಾಡುವದು. ಹೀಗೆ ಸ್ವಾವಲಂಬನದ ಅರಿವು ಕಳೆದು ಕೊಂಡವರನ್ನು ಆಧ್ಯಾತ್ಮವಿಚಾ ರವು ಆಕರ್ಷಿಸುವದು, ಆವರಿಸುವದು; ಸ್ವತಂತ್ರ ಬುದ್ಧಿಯು ಕಡಿಮೆ ಯಾಗುವದು, ಅದರಿಂದ ಶ್ರದ್ಧೆ ಹೆಚ್ಚುವದು. ಶ್ರದ್ಧೆಯಿಂದ ಮೋಕ್ಷ ಎಂಬುದಾಗಿ ಉಪದೇಶಿಸುವವರಾಗಲಿ, ಇದನ್ನು ಗ್ರಹಿಸುವವರಾಗಲಿ ಈ ಬಗೆಯ ನಂಬಿಕೆಯು ಇಬ್ಬರಿಗೂ ಸ್ವಾಭಾವಿಕವಾಗಿಯೇ ಅವಶ್ಯ ವೆಂಬದನ್ನು ಮರೆತುಬಿಡುತ್ತಾರೆ. ಬುದ್ಧಿಗೆ ಹೊರತಾದ ಶ್ರದ್ಧೆಯು ಸೃಷ್ಟಿಧರ್ಮವಲ್ಲ. ಆದ್ದರಿಂದ ಗಂಡಸೇನು, ಹೆಂಗಸೇನು, ತನ್ನ ಧರ್ಮ ವನ್ನು—ಒಳಿತಾಗಲಿ, ಕೆಡುಕಾಗಲಿ—ತಾನೇ ಕಂಡುಹಿಡಿದು ತನ್ನ ಏಳಿಗೆ ಯನ್ನು ಸ್ವತಂತ್ರವಾಗಿ ಸಾಧಿಸಿಕೊಳ್ಳಬೇಕು. ಹೆರವರು ಹಾಕಿಕೊಟ್ಟ ಧರ್ಮವು ಅಥವಾ ಹ್ಲಾದಿಯು ಯಾರಿಗೂ ಎಂದಿಗೂ ಶ್ರೇಯಸ್ಕರವಲ್ಲ.

ಸಾಮಾನ್ಯವಾಗಿ ಧರ್ಮವು ಎಲ್ಲರಿಗೂ ಪ್ರಕೃತಿಧರ್ಮವನ್ನು ತಿರಸ್ಕರಿಸಬೇಕೆಂದು ಉಪದೇಶಿಸುವದು. ಎಂದ ಬಳಿಕ, ಹೊಸತಾದ ಏಳಿಗೆಯ ಹಾದಿಯನ್ನು ಸಾಹಸದಿಂದ ನಡೆಯುವದಕ್ಕೆ ಅದು ಅಡ್ಡಗಾಲು ಹಾಕದೆ ಏನು ಮಾಡೀತು? ಅವಳ ಕಾರ್ಯಕ್ಷೇತ್ರವು ಪ್ರೇಮ, ಪಾವಿತ್ರ್ಯ, ಭಕ್ತಿ, ಶ್ರದ್ಧೆ ಇವುಗಳಲ್ಲಿ ಮಾತ್ರ ಮರ್ಯಾದಿತವಾಗಿದೆ. ಇದನ್ನು ಬಿಟ್ಟು ವೈದ್ಯಶಾಸ್ತ್ರದಲ್ಲಿ ಕೈಹಾಕಲು, ರಂಗಭೂಮಿಯಲ್ಲಿ ಕಾಲು ಹಾಕಲು ತೊಡಗುವದೆಂದರೇನು? ತೊಡಗುವಳಾದರೂ ಹೇಗೆ? ಅದರಲ್ಲಿಯೂ ವೈದ್ಯಕಕ್ಕೆ ಸಂಭಂಧಪಟ್ಟ ಗರಮಿ-ಪರಮಾ ಮುಂತಾದ ಕೆಟ್ಟ ಕೆಟ್ಟ ಬೇನೆಗಳ ತಿಳಿವಳಿಕೆ, ಅವುಗಳ ನಿವಾರಣೋಪಾಯದ ಅರಿವು ಹೆಂಗಸಿಗೇಕೆ ಬೇಕು? ಈ ಬಗೆಯ ಭಾವನೆಗಳಿಂದ ಇಡೀ ಮಾನವ ಪ್ರಪಂಚಕ್ಕೆ, ಅದರಲ್ಲಿಯೂ ಹೆಣ್ಣುಜಾತಿಗೆ ಅತೀವ ನಷ್ಟವುಂಟಾಗಿರುವುದು. ಇನ್ನು ಮುಂದಾದರೂ ಈ ನಷ್ಟವನ್ನೂ ತಪ್ಪಿಸಬೇಕಾದರೆ, ಈ ಕ್ಷೇತ್ರದಲ್ಲಿ ಹೆಂಗಸರು ಬರಬಾರದೆಂಬ ಮೂಢಕಲ್ಪನೆಯನ್ನು ಸಮಾಜವು ಬಿಟ್ಟುಕೊಡಲೇ ಬೇಕು. ಇಲ್ಲದಿದ್ದರೆ, ಸಮಾಜದ ಕಲ್ಯಾಣಕ್ಕಾಗಿಯೂ ತನ್ನ ಕಲ್ಯಾಣಕ್ಕಾಗಿಯೂ ಹೆಂಗಸರು ದೇಹಧರ್ಮದ ಮತ್ತು ವೈದ್ಯಶಾಸ್ತ್ರದ ಯಥಾರ್ಥಜ್ಞಾನವನ್ನು ಮಾಡಿಕೊಂಡು, ಆರೋಗ್ಯ-ಅನಾರೋಗ್ಯ. ಸುಖ-ದುಃಖ ಇವುಗಳ ಕಾರಣಗಳನ್ನೂ ಆರೋಗ್ಯ-ಸುಖಗಳ ಸಂಪಾದನೆಯ ಮಾರ್ಗವನ್ನೂ ಅನಾರೋಗ್ಯ-ದುಃಖಗಳ ನಿವಾರಣೋಪಾಯುಗಳನ್ನೂ ತಮ್ಮ ಹೊಸಗಣ್ಣಿನಿಂದ ಕಂಡು ಹಿಡಿಯಲೇಬೇಕಾಗುವದು; ಇಂತಹ ಪವಿತ್ರವಾದ ಸಮಾಜಸೇವೆಯನ್ನು ಮಾಡಲು ಧೀರತೆಯಿಂದ ಮುಂದುವರಿಯಲೇ ಬೇಕಾಗುವದು.



# ಶರೀರ-ಮನಸ್ಸುಗಳನ್ನು ಬೇರ್ಪಡಿಸುವ ಹುಚ್ಚು



ದೇಹಧರ್ಮವನ್ನರಿಯದೆ, ಆಹಾರವಿಹಾರಗಳಲ್ಲಿ ಮನಬಂದಂತೆ ವರ್ತಿಸಿದರೆ ಅನಾರೋಗ್ಯವು ಕಟ್ಟಿಟ್ಟದ್ದೇ ಸರಿ. ಆರೋಗ್ಯದ ಕಡೆಗೆ ಲಕ್ಷ್ಯವೀಯದೆ ಸಮಾಜವು ಕೆಡುವುದಕ್ಕೆ ವೇದಾಂತಿಗಳ, ನೀತಿವಂತರ 'ಪ್ರಕೃತಿಗಿಂತ ಆತ್ಮ ಹೆಚ್ಚಿನದು,' 'ಇಹಕ್ಕಿಂತ ಪರವುಮಿಗಿಲಾದದ್ದು,' 'ದೇಹವನ್ನು ಕೊಂದು ಆತ್ಮವನ್ನು ಬದುಕಿಸು' ಎಂಬೀ ಮುಂತಾದ ಉಪ್ಪ ದೇಶಗಳೇ ಮೂಲಕಾರಣಗಳೆಂದು ಎಷ್ಟು ಒತ್ತಿ ಹೇಳಿದರೂ ಸಾಲದು. ಇಹದ ಕಲ್ಯಾಣಕ್ಕೆ ವಿಮುಖವಾದ ಮನಃ ಪ್ರವೃತ್ತಿಯು ಅತ್ಯಂತ ಘಾತಕ ವಾದದ್ದು. ಆದ್ದರಿಂದ ನಾವು ಹಳೆಯ ವಿಚಾರಗಳನ್ನು ಬದಿಗೊತ್ತಿ, ನೈತಿಕಧಾರ್ಮಿಕ ಕಟ್ಟಳೆಗಳಂತೆ ಪ್ರಕೃತಿ ಧರ್ಮದ ಕಟ್ಟಳೆಗಳನ್ನೂ ಪಾಲಿ ಸುವದಗತ್ಯವೆಂಬ ತತ್ವವನ್ನು ಪ್ರಚಾರದಲ್ಲಿ ತರಬೇಕು. ಇಲ್ಲದಿದ್ದರೆ ಯಾವ ವೇದಾಂತವೂ ಮನುಷ್ಯನನ್ನು ದುಃಖದಿಂದ ಮುಕ್ತಗೊಳಿಸಲಾ ರದು. ಧಾರ್ಮಿಕ, ನೈತಿಕ ಮೊದಲಾದ ಕರ್ತವ್ಯ ಕರ್ಮಗಳಂತೆ, ಮನ ರಂಜನೆ, ಐಹಿಕಸುಖ, ಸ್ವತಂತ್ರವಿಚಾರದ ಹಕ್ಕು ಎಲ್ಲರಿಗೂ ಇರಬೇಕು; ಇವೇ ಸುಖಜೀವನದ ಕೀಲುಗಳು.

ದೇಹವು ಸದೃಢವೂ ಸೊಬಗಿನದೂ ಆಗಿರುವುದು ಐಹಿಕ ಸುಖ ಸಾಧನೆಗೆ ಅಗತ್ಯವಾದದ್ದು. ಆದ್ದರಿಂದ ಧಾರ್ಮಿಕ ಆಚಾರಗಳಿಗೂ ಸ್ವಚ್ಛ ವಾದ ಬಯಲು ಹವೆ ಮತ್ತು ವ್ಯಾಯಾಮ ಇವುಗಳ ನಿಕಟ ಸಂಬಂಧವು ಚಿಕ್ಕಂದಿನಿಂದಲೂ ಸಾಧಿಸಲ್ಪಡಬೇಕು. ಯಾವ ಪರಿಸ್ಥಿತಿಯಲ್ಲಿಯಾ ದರೂ ಇದರ ಮಹತ್ವವನ್ನೂ, ಅಗತ್ಯವನ್ನೂ ಲಕ್ಷ್ಯದಲ್ಲಿಟ್ಟುಕೊಂಡೇ ನಡೆ ಯುವ ರೂಢಿಯು ಚಿಕ್ಕಂದಿನಿಂದಲೇ ಬೀಳಬೇಕು-ಇದರಲ್ಲಿ ಗಂಡು-

ಹೆಣ್ಣೆಂದು ಭೇದಮಾಡಲಾಗದು. ಆದರೆ ಈ ಮಾತನ್ನೊಪ್ಪದೆ ಈ ವಿಷಯ ದಲ್ಲಿ ಗಂಡಸರಿಗಿಂತ ಹೆಂಗಸರಿಗೆ ಹೆಚ್ಚು ಆತಂಕವನ್ನು ಒಡ್ಡಿದ್ದರಿಂದ, ಅವರನ್ನು ಅಜ್ಞಾನದಲ್ಲಿಡುತ್ತಿರುವದರಿಂದ ಅವರಿಗುಂಟಾಗುವ ಸಣ್ಣದೊಡ್ಡ ವ್ಯಾಧಿಗಳನ್ನು ನಿವಾರಿಸುವುದು ದೊಡ್ಡ ಧನ್ವಂತಿರಗಳಿಗೂ ಆಗಿಲ್ಲ; ಆಗುವ ದಿಲ್ಲ. ಯಾವದೇ ಜ್ಞಾನವನ್ನು ಪಡೆಯುವದಕ್ಕೆ ಗಂಡು ಹೆಣ್ಣು, ಬಡವ-ಸಿರಿವಂತ, ಕೀಳುಜಾತಿ-ಮೇಲು ಜಾತಿ ಎಂಬ ಪಕ್ಷಪಾತವಿಲ್ಲದೆ ಅನು ಕೂಲ ಮಾಡಿಕೊಟ್ಟು, ಅವರೆಲ್ಲರ ಜ್ಞಾನದ ಪರಸ್ಪರ ವಿನಿಮಯದಿಂದ ಕಟ್ಟಿದ ಸಾಮಾಜಿಕ ಅಥವಾ ಸಾಮೂಹಿಕ ನಿಯಮಗಳೇ ಪರಿಪೂರ್ಣವೆನಿ ಸುವವು. ಶರೀರಾರೋಗ್ಯವಿಷಯವೂ ಹಾಗೆಯೇ ಸ್ತ್ರೀಯರನ್ನು ದೇಹ ಧರ್ಮದ ಜ್ಞಾನದಿಂದ ಬೇರ್ಪಡಿಸಿಟ್ಟರೆ ಸ್ತ್ರೀಯರ ದೈಹಿಕಸುಖವಾಗಲಿ ಸ್ತ್ರೀಪುರುಷಸಂಬಂಧವಾದ ಐಹಿಕಸುಖವಾಗಿ ಪರಿಪೂರ್ಣ ವಾಗಲಾರದು; ಇಡೀ ಮಾನವ ಜಾತಿಗೇ ಶಾಂತಿಪುಷ್ಟಿ ತುಷ್ಟಿಗಳು ಲಭಿಸಲಾರವು.

ದೈಹಿಕ ಆರೋಗ್ಯ ನಿರಾರೋಗ್ಯಗಳಂತೆ ಮಾನಸಿಕ ಆರೋಗ್ಯ ನಿರಾ ರೋಗ್ಯಗಳಾದರೂ ನಿಶ್ಚಿತವಾದ ಪ್ರಕೃತಿಧರ್ಮದ ಕಟ್ಟಳೆಗಳನ್ನವಲಂಬಿ ಸಿರುವದು. ಹುಚ್ಚು ಹಿಡಿದರೆ ಮಾತ್ರ ಮಾನಸಿಕ ರೋಗವೆಂದು ಎಣಿಸು ವದುಂಟು; ಇದು ಸರಿಯಲ್ಲ. ಪ್ರಕೃತಿಧರ್ಮದ ಉಲ್ಲಂಘನೆಯಿಂದ ಉಂಟಾ ಗುವ ಮಾನಸಿಕ ವ್ಯಥೆಗಳೆಲ್ಲವೂ ಮಾನಸಿಕ ರೋಗಗಳೇ. ಪ್ರಕೃತಿಗೆ ಮತ್ತು ಸತ್ಯಕ್ಕೆ ಅನುಗುಣವಾಗಿ ನಮ್ಮ ವಿಚಾರಗಳೂ ಭಾವನೆಗಳೂ ಇದ್ದರೆ ನಮ್ಮ ಮನಸು ಆರೋಗ್ಯಯುಕ್ತವೂ ಸುಖಿಯೂ ಆಗಿರುವದು; ಇಲ್ಲವಾದರೆ ರೋಗಗ್ರಸ್ತವಾಗುವದು, ದುಃಖಿಯಾಗುವದು. ನಮ್ಮ ಮಾನಸಿಕ ವ್ಯಥೆಗಳೆಲ್ಲವೂ ನಮ್ಮ ದೇಹದೊಳಗಿನ ನೋವುಗಳ ದ್ಯೋತ ಕಗಳು; ಮತ್ತು ಅವು ರೋಗದ ಹಾಗೂ ಪಾಪದ ಗುರುತುಗಳು.

ಯಾರಲ್ಲಿಯೇ ಆಗಲಿ ಮನೋವ್ಯಥೆಯು ಇರುವಲ್ಲಿ ಯಾವದಾದ ರೊಂದು ದೋಷವು ಇದ್ದೇ ತೀರುವದು. ನಮ್ಮ ಹಾದಿ ಸತ್ತೋ ಅಸತ್ತೋ ಎಂಬುದನ್ನು ತಿಳಿಯಲು ಶಾರೀರಿಕ ಮಾನಸಿಕ ಸುಖದುಃಖಗಳೇ ಒರೆಗ ಲ್ಲಾಗಿರುವವು; ನಮ್ಮ ಜೀವನ ಯಾತ್ರೆಯಲ್ಲಿ ನಾವು ಮಾಡುವದು ಯಾವದು ಸರಿ ಯಾವದು ತಪ್ಪು ಎಂಬುದನ್ನು ತೋರಿಸಿಕೊಡುವವು ಸುಖ

ದುಃಖಗಳೇ. ಆದ್ದರಿಂದ ಎಲ್ಲಿ ಸುಖವೂ ಆನಂದವೂ ನಮಗೆ ಸಿಗುವವೋ ಅವುಗಳ ಮೂಲವನ್ನು ಕಂಡುಹಿಡಿದು ಅದರಂತೆ ವರ್ತಿಸಬೇಕು; ಯಾವದು ದುಃಖಕಾರಿಯೋ ಅದನ್ನು ಬಿಟ್ಟುಬಿಡಬೇಕು.

ನಿರುತ್ಸಾಹವನ್ನಾಗಲಿ ದುಃಖವನ್ನಾಗಲಿ ಉಂಟುಮಾಡುವ ವಿಕಾರಗಳೇ ಆಗಲಿ ವಿಚಾರ-ಭಾವನೆ-ಕಲ್ಪನೆಗಳೇ ಆಗಲಿ ಏನವು ? ಅವು ಮಾನಸಿಕ ರೋಗಗಳೇ ಹೌದು. ಭಯ, ಮತ್ಸರ, ಕ್ರೋಧ, ಚಿಂತೆ ಏನಿವು ? ನಮ್ಮ ಮಾನಸಿಕವಾದ ಕುಂದುಕೊರತೆಗಳ ಪ್ರತಿಬಿಂಬಗಳಲ್ಲವೆ ? ಇವುಗಳ ಮೂಲವು ಅತಿಗೂಢವಾಗಿರುವದು; ಅದನ್ನು ಹುಡುಕಿತೆಗೆದು ನಿವಾರಿಸುವದರಿಂದಲೇ ಮನಸು ಮರಳಿ ಆರೋಗ್ಯವನ್ನು ಪಡೆಯಬಲ್ಲದು. ನಮ್ಮ ನಡೆವಳಿಯೊಳಗಿನ ಪ್ರತಿಯೊಂದು ತಪ್ಪು ದೈಹಿಕ ರೋಗಕ್ಕೆ ಕಾರಣವಾಗುವಂತೆ, ನಮ್ಮ ವಿಚಾರದೊಳಗಿನ ತಪ್ಪು ಅಥವಾ ನಮ್ಮ ಕಲ್ಪನೆಯೊಳಗಿನ ಅಸತ್ತು ಮಾನಸಿಕ ರೋಗಕ್ಕೆ ಕಾರಣವಾಗುವದು.

ವಿಚಾರಿಸಿ ನೋಡಿದಲ್ಲಿ ನಮ್ಮ ತನು-ಮನಗಳು ಬೇರ್ಪಡಿಸಲು ಬಾರದಷ್ಟು ಹೊಂದಿಕೊಂಡು ಹೋಗಿವೆ. ಒಂದರ ಆರೋಗ್ಯ-ಅನಾರೋಗ್ಯಗಳು, ಒಂದರ ಸುಖ-ದುಃಖಗಳು ಇನ್ನೊಂದಕ್ಕೆ ಅಂಟಿಕೊಳ್ಳದಿರವು. ನೈತಿಕವೆಂಬದೊಂದು ರೋಗವಿದೆ ಎಂದಾಗಲಿ, ದುಃಖ-ಭಯುಗಳು ರೋಗಗಳೆಂದಾಗಲಿ ಜನರು ಸಾಮಾನ್ಯವಾಗಿ ಒಪ್ಪುವದಿಲ್ಲ. ಆದ್ದರಿಂದಲೇ ಅವುಗಳನ್ನು ಹೋಗಲಾಡಿಸಲು ಅವರು ಯತ್ನಿಸಲೊಲ್ಲರು; ಇಷ್ಟೇ ಅಲ್ಲ, ಅವುಗಳಲ್ಲಿಯೇ ಧನ್ಯತೆಯನ್ನು ಹಚ್ಚಿಕೊಳ್ಳುತ್ತಿರುವರು. ಮಾನಸಶಾಸ್ತ್ರವೆಂಬುದೊಂದು ಇದೆ ಎಂಬುದರ ಅರಿವೇ ಅವರಿಗಿಲ್ಲ. ಈ ದುಃಖಾದಿಗಳೆಲ್ಲ ದೈವಾಧೀನವಾದ ವಿಷಯಗಳೆಂದು ತಿಳಿದು ಸುಮ್ಮನೆ ಬಳಲುತ್ತಿರುವರು; 'ನಮ್ಮ ದೈವದಲ್ಲಿದ್ದದ್ದಾಗುವದು' ಎಂಬ ಬೀಜಮಂತ್ರದಿಂದ ಬಂದದ್ದಕ್ಕೆ ಸಮಾಧಾನಪಟ್ಟುಕೊಳ್ಳುವರು. ಇದರ ಕಟು ಅನುಭವವು ನಮ್ಮ ಹೆಣ್ಣುಮಕ್ಕಳಲ್ಲಿ ಪದೇ ಪದೇ ಕಂಡುಬರುತ್ತದೆ. ಇಂತಹ ದುಃಖದಿಂದ ಎಷ್ಟೋ ಉಚ್ಚವಾದ ಕಲ್ಯಾಣಕರವಾದ ತತ್ವಗಳು, ಸಿದ್ಧಾಂತಗಳು, ಬೋಧಗಳು ಹುಟ್ಟಿರಬಹುದು. ಆದರೆ ಆ ದುಃಖಗಳೇ ಕಲ್ಯಾಣಕರಗಳೆಂದು ತಿಳಿಯುವದು ಮೂರ್ಖತನವಲ್ಲವೇ ? ಒಬ್ಬನು ಬಹಳ ದಿನಗಳಿಂದ

ಬೇನೆಯಿಂದ ಹಾಸಿಗೆ ಹಿಡಿದಿರುವನೆಂದು ತಿಳಿಯೋಣ. ಇದರಿಂದ ಕೆಲವರು ಶುಶ್ರೂಷೆಯನ್ನು ಮಾಡುವದು ಹೇಗೆಂಬದನ್ನು ತಿಳಿದುಕೊಂಡಿರಬಹುದು, ಕೆಲವರಿಗೆ ಬೇನೆಯ ಜ್ಞಾನವಾಗಿರಬಹುದು; ಕೆಲವರು ಹಣವನ್ನು ಗಳಿಸಿರಬಹುದು, ಕೆಲವರಲ್ಲಿ ದಯೆ-ಸಹಾನುಭೂತಿಗಳು ಉಕ್ಕೇರಿ, ಆರೋಗ್ಯ ಧಾಮುಗಳನ್ನು ಕಟ್ಟಿಸಿರಬಹುದು, ಮತ್ತೆ ಕೆಲವರಿಗೆ ಸಂಸಾರವು ಹೇಯವೆನಿಸಿ ಸನ್ಯಾಸವನ್ನು ಕೈಕೊಂಡು ಮೋಕ್ಷವನ್ನು ಪಡೆದಿರಬಹುದು. ಇವೆಲ್ಲವೂ ಅವಾಂತರ್ಯವಾದ ಲಾಭಗಳೇನೋ ಸರಿ. ಆದರೆ ಬೇನೆ ಒಳ್ಳೆಯದು, ಅದಕ್ಕೆ ನಮ್ಮಲ್ಲಿ ಆಶ್ರಯಕೊಡಬೇಕೆಂದು ಯಾರಾದರೂ ಕೋರಬಹುದೆ !

ಯಾವ ಶಾರೀರಿಕ ರೋಗವಾದರೂ ನಮ್ಮ ಸಾಮಾನ್ಯ ಜೀವಿತದ ಪೂರ್ಣತ್ವಕ್ಕೆ ಕಂಟಕವಾಗದೆ ಬಿಡದು. ಇದರಂತೆ ಪ್ರತಿಯೊಂದು ದುಃಖವೂ ನಮ್ಮ ನೈತಿಕ ಜೀವನದ ಘನತೆಗೆ ಮತ್ತು ಸೌಂದರ್ಯಕ್ಕೆ ಕುಂದು ತಾರದೆ ಇರುವದಿಲ್ಲ ದುಃಖಿಯೂ ರೋಗಿಯೂ ಆದವನು ಪೂರಾ ಒಳ್ಳೆಯ ಮನುಷ್ಯನಲ್ಲ; ದುಃಖ-ರೋಗಗಳು ಎಷ್ಟು ಮಟ್ಟಿಗಿರುವವೋ ಅಷ್ಟು ಮಟ್ಟಿಗೆ ಅವನು ಪಾಪಿಯಾಗಿರುವನು. ದುಃಖವನ್ನು ಅಥವಾ ರೋಗವನ್ನು ಕಂಡರಿಯದಂತಿರುವದೇ, ಮಾನವರಿಗೆಲ್ಲರಿಗೂ ಇಷ್ಟವಾದ ದೈಹಿಕ ನೈತಿಕ ಪೂರ್ಣಾಯುಷ್ಯದ ಗುರಿಯಾಗಿರಬೇಕು. ಆನಂದವೂ ತತ್ಸದೃಶವಾದ ಭಾವನೆಗೂ ದೇಹದ ಆರೋಗ್ಯ-ಸುಸ್ಥಿತಿಗಳಿಗೆ ನಿಕಟಸಂಬಂಧಿಗಳಾಗಿರುವವು; ದುಃಖವೂ ತತ್ಸದೃಶ ಸಂಗತಿಗಳೂ ತಮ್ಮ ಸಾವತ್ಯ-ತೀವ್ರತೆಗಳಿಗನುಗುಣವಾಗಿ ದೇಹದ ಮೇಲೆ ಕೆಡಕು ಪರಿಣಾಮವನ್ನುಂಟುಮಾಡುವವು; ರೋಗಗಳಿಗೆ ಔತಣಕೊಡುವವು. ಆದ್ದರಿಂದ ಮಾನಸಿಕ ವ್ಯಥೆಗಳನ್ನು ದುರ್ಲಕ್ಷಿಸುವ ಡಾಕ್ಟರನು ಶಾರೀರಿಕ ರೋಗಗಗಳನ್ನು ನಿವಾರಿಸಲು ಸಮರ್ಥನಾಗನು; ಶಾರೀರಿಕ ರೋಗಗಳನ್ನು ನಿರ್ಲಕ್ಷಿಸುವ ನೀತಿಶಾಸ್ತ್ರಜ್ಞನು ಮಾನಸಿಕ ವ್ಯಥೆಗಳನ್ನು ಹೋಗಲಾಡಿಸಲು ಸಮರ್ಥನಾಗನು.



# ಸ್ತ್ರೀಪುರುಷ ಸೌಂದರ್ಯದ ಗುಟ್ಟು



ಕೇವಲ ಪರವನ್ನೇ ಅನುಲಕ್ಷಿಸಿ, ಅದಕ್ಕಾಗಿ ಇಹವನ್ನು ದುರ್ಲಕ್ಷಿಸುವ ಅಧ್ಯಾತ್ಮವಾದವು ಸಮಾಜಕ್ಕೊಂದು ರೋಗವಾಗಿದೆ. ಜ್ಞಾನಿಯು ಅಥವಾ ಬುದ್ಧಿವಂತನು ಜ್ಞಾನದಿಂದಲೂ ಬುದ್ಧಿಮತ್ತೆಯಿಂದಲೂ ಜನರನ್ನು ಬೆರಗುಗೊಳಿಸಬಹುದು ; ಆದರೆ ಪ್ರಕೃತಿಯನ್ನು ಮೋಸಗೊಳಿಸಲಾರನು. ಅವನು ಎಷ್ಟು ಜ್ಞಾನಿಯಿದ್ದರೂ ನಿಸರ್ಗ ನಿಯಮವನ್ನುಲ್ಲಂಘಿಸುವ ಅವನನ್ನು ಶಿಕ್ಷಿಸಿ ರೋಗಯಾತನೆಗೆ ಗುರಿಪಡಿಸದೆ ಇರುವದಿಲ್ಲ. ಮಿದುಳು ಅಥವಾ ಮನಸು ಎಷ್ಟು ಬೆಳೆದರೇನು ? ದೇಹವನ್ನು ಸರಿಯಾಗಿ ಕಾಪಾಡಿಕೊಳ್ಳದಿದ್ದರೆ ಅವನು ಸುಖಿಯಾಗಲಾರನು. ಅವನಲ್ಲಿ ಒಂದುವೇಳೆ ದೈಹಿಕ ನ್ಯೂನತೆಯು ಒಡೆದು ಕಂಡುಬರದಿದ್ದರೂ ಅವನ ಸಂತತಿಯಲ್ಲಿ ಕಂಡುಬಾರದಿರದು. ನಾವೀಗ ದೇಹವನ್ನು ಎಷ್ಟರಮಟ್ಟಿಗೆ ದುರ್ಲಕ್ಷಿಸುವೆವೋ ಅಷ್ಟರಮಟ್ಟಿಗೆ ನಮ್ಮ ಮಕ್ಕಳು ಅಶಕ್ತರೋ, ಅಂಗಹೀನರೋ, ಕುರೂಪಿಗಳೋ ಆಗುವದು ಖಂಡಿತ. ಪಂಡಿತನೆಂದು ಪ್ರಸಿದ್ಧನಾದವನ ಹೊಟ್ಟೆಯಲ್ಲಿ ಹುಟ್ಟಿದರೂ ಅವರು ದುರ್ದೈವಿಗಳೇ ಸರಿ. ನಾವು ಬಹುಕಾಲದಿಂದ ಈ ಬಗೆಯ ಅಧ್ಯಾತ್ಮವಾದವನ್ನು ಅನುಸರಿಸುತ್ತ ಬಂದುದರಿಂದ, ಮತ್ತು ಈಗಲಾದರೂ ಬುದ್ಧಿವಾದಕ್ಕೇ ಹೆಚ್ಚಿಗೆ ಮಹತ್ವಕೊಡುತ್ತಿರುವದರಿಂದ ನಿರಾಶೆಯು, ಸೋಮಾರಿತನದ, ಉದಾಶೀನತೆಯ ವಾತಾವರಣವೇ ಕಂಡುಬರುತ್ತಿದೆ. ಮಾನವ ಜಾತಿಗೆ ಆದರ್ಶಪ್ರಾಯವಾದ ದೈಹಿಕಗುಣಪೂರ್ಣವಾದ ಒಂದು ವ್ಯಕ್ತಿಯೂ ಅಪರೂಪ. ಇದು ಅತ್ಯಂತ ದುಃಖದ, ನಾಚಿಕೆಗೇಡಿತನದ ಮಾತಲ್ಲವೆ? ದೈಹಿಕ ಸಂಪತ್ತು ಇಲ್ಲದಿದ್ದರೆ ಮಾನಸಿಕ ಸಂಪತ್ತಿನ ಅನುಭೋಗದ ಸವಿಯನ್ನಾದರೂ ಸವಿಯುವದೆಂತು? ಅಂಥವರು ಖಂಡಿತವಾಗಿಯೂ ಮಾನಸಿಕ ಸುಖಕ್ಕೆ ಎರವಾಗುವರು.

ಏಕೆಂದರೆ ದೇಹಬಲವನ್ನು ಕುಗ್ಗಿಸುವ ಅಧ್ಯಾತ್ಮವು ಮನೋಬಲವನ್ನು ಕುಗ್ಗಿಸುವದು; ದೈಹಿಕ ಮಾನಸಿಕ ಬಲಗಳೆರಡೂ ಪರಸ್ಪರಾವಲಂಬಿ ಯಾಗಿರುವವು.

ನಾವು ನಿಸರ್ಗದ ಕಟ್ಟಳೆಯನ್ನು ಮುರಿದು, ಅದರ ತಕ್ಕ ಶಿಕ್ಷೆಯನ್ನು ಅನುಭವಿಸುತ್ತಿದ್ದೇವೆ; ಅರಕ್ತರೂ ವ್ಯಂಗರೂ ನಿಸ್ತೇಜರೂ ಬಡಕರೂ ಆಗಿ ಬಳಲುತ್ತಿದ್ದೇವೆ. ದಿನದಿನಕ್ಕೆ ಮಾನವ ವರ್ಗವು ಕ್ಷಯರೋಗಗ್ರಸ್ತವಾಗುತ್ತಿದೆ. ದೈಹಿಕ ವ್ಯಥೆಯು ಹೆಚ್ಚಿದಾಗ--ಅದೂ ಸ್ವಲ್ಪ ಕಾಲಮಾತ್ರ-ನಾವು ಮಾಡಿದ್ದು ತಪ್ಪೆಂದು ಮರುಗುತ್ತೇವೆ ಅಲ್ಪಾವಧಿಯಲ್ಲಿಯೇ ಸೋಕ್ಷಮೋಕ್ಷವನ್ನು ತೀರ್ಮಾನಿಸುವ ಪ್ಲೇಗು-ಕಾಲರಾ ಮುಂತಾದವು ಬಂದಾಗ ಚುಚ್ಚುಮದ್ದು ಮೊದಲಾದವುಗಳಿಂದ ದೇಹವನ್ನುಳಿಸಲು ಧಡಪಡಿಸುತ್ತೇವೆ. ಆದರೆ ದೇಹವು ಜೀರ್ಣ (cronic) ರೋಗಗಳಿಂದ ಹುಳಿತಿರುವದರಿಂದ ಅದು ಬದುಕಿದ್ದರೂ ಸತ್ತಂತೆಯೇ ಸರಿ. ಇತ್ಯರ್ಥವೇನಂದರೆ, ನಾವು ದೀರ್ಘಾಯುಷ್ಯವನ್ನು ಪಡೆದಿರುವೆವೆಂದು ತೋರಿಸಿಕೊಳ್ಳುತ್ತಿದ್ದರೂ ಬಾಳಿನಲ್ಲಿ ನಂಜು ಗೂಡಿಸುತ್ತಿದ್ದೇವೆ. ಈ ಬಗೆಯ ಶೋಚನೀಯ ಸ್ಥಿತಿಯು ಗಂಡಸರಿಗಿಂತ ಹೆಚ್ಚಾಗಿ ಹೆಂಗಸರಲ್ಲಿ ಕಂಡು ಬರುತ್ತದೆ; ಆದರೂ ಮುಂದಿನ ಮಾನವ ಪೀಳಿಗೆಯೇ ಇದರ ದುಷ್ಪರಿಣಾಮುವನ್ನು ಅನುಭವಿಸಬೇಕಾಗುವದು. ಸುಖಮಯವಾದ ದೀರ್ಘಾಯುಷ್ಯವು ಅತ್ಯಂತ ಶ್ರೇಷ್ಠವಾದದ್ದು, ದುಃಖಮಯ ದೀರ್ಘಾಯುಷ್ಯಕ್ಕಿಂತ ತೇಜಸ್ವಿಯಾದ ಅಲ್ಪಾಯುಷ್ಯವು ಲೇಸು ಎಂಬುದನ್ನು ನಾವು ಕೂಡಲೇ ಅರಿತುಕೊಳ್ಳಬೇಕು.

ಸಾಮಾಜಿಕ ಬಹಿಷ್ಕಾರವೆಂಬ ಐಹಿಕಶಿಕ್ಷೆ, ನರಕವಾಸವೆಂಬ ಪಾರಲೌಕಿಕ ಶಿಕ್ಷೆ ಇವುಗಳ ಹೆದರಿಕೆಯಿಂದ ನಮ್ಮ ಆಧ್ಯಾತ್ಮಿಕ ಧರ್ಮವು ನಮ್ಮ ಸತ್ವವನ್ನೆಲ್ಲ ಹಿಂಡಿ ತೆಗೆದಿದೆ. ಯಾವಾಗಲೂ ತ್ಯಾಗ, ಕಷ್ಟ ಸಹಿಷ್ಣುತೆ, ಶ್ರದ್ಧೆ (ಅಂಧಾನು ಕರಣ) ಇತ್ಯಾದಿಗಳ ಉಪದೇಶದಿಂದ ಜೀವವನ್ನು ಪೌರುಷಹೀನವನ್ನಾಗಿ, ನಿಷ್ಪ್ರಯೋಜಕವನ್ನಾಗಿ ಮಾಡಿಬಿಟ್ಟಿದೆ. ದುಃಖವನ್ನು ಅನುಭವಿಸುವದೇ ಒಂದು ದೊಡ್ಡಸ್ತಿಕೆಯೆಂಬ ಭಾವನೆಯನ್ನು ಬೇರೂರಿಸಿದೆ. ಸ್ತ್ರೀಯರನ್ನಂತೂ ಈ ಭಾವನೆಯ ಬಲಿ

ಯಲ್ಲಿ ಬಲವಾಗಿ ಬಿಗಿದು ಬದುಕಿದ ಹೆಣವನ್ನಾಗಿ ಮಾಡಿದೆ. ಅವಳು ಹೆಚ್ಚಿಗೆ ಕಲಿಯಬಾರದು, ಸಾಹಸ ಮಾಡಬಾರದು, ಸ್ವಾವಲಂಬಿಯಾಗಬಾರದು, ತನ್ನ ನೀತಿಯನ್ನು ತಾನೇ ನಿರ್ಧರಿಸಲಾಗದು, ಅವಳು ನಗಕೂಡದು, ಅವಳು ವಿಲಾಸಿಯಾಗಿರುವದಂತೂ ಶುದ್ಧ ತಪ್ಪು, ಅದು ಅವಳ ಅಧೋಗತಿಯ ಮಾರ್ಗವು! ನಿಜವಾಗಿಯೂ ಇಂಥ ಈ ಶೋಚನೀಯ ಸ್ಥಿತಿಗಿಂತ ಅವಳಿಗೆ ಅಧೋಗತಿಯು ಬೇರೊಂದುಂಟೆ? ಆದರೆ ಪ್ರಕೃತಿ ಧರ್ಮಕ್ಕೆ ವಿರುದ್ಧವಾಗಿ ಯಾವ ಆಧ್ಯಾತ್ಮಿಕ ಧರ್ಮವೇ ಆಗಲಿ, ಮಾನವನನ್ನು ಎಷ್ಟು ಕಾಲ ಹತ್ತಿಕ್ಕಿಡಬಲ್ಲದು? ಒಂದಿಲ್ಲೊಂದು ದಿನ ಪ್ರಕೃತಿಯು ಈ ಧರ್ಮದ ದಬ್ಬಾಳಿಕೆಯನ್ನು ಪ್ರತಿಭಟಿಸುವದು ಮಾನವನಲ್ಲಿಯ ಸ್ವಾಭಾವಿಕವಾದ ಸ್ವಾಭಿಮಾನವೂ ಸ್ವಾತಂತ್ರ್ಯ ಲಾಲನೆಯೂ ಒಮ್ಮಿಲ್ಲೊಮ್ಮೆ ಚೇತರಿಸಿಕೊಳ್ಳುವವು. ಪ್ರಕೃತಿ ಧರ್ಮಕ್ಕೆ ಹೊಂದಿಕೆಯಾದಂಥ ಒಂದು ಹೊಸ ಧರ್ಮವು ಹುಟ್ಟಿ, ಮಾನವನ ದೈಹಿಕ ಮಾನಸಿಕ ಉನ್ನತಿಗಾಗಿ ಬೇಕಾಗಿದ್ದ, ಆತ್ಮವಿಶ್ವಾಸ, ಸ್ವಾವಲಂಬನ ಪೌರುಷ ಮತ್ತು ಜೀವನ ಸೌಖ್ಯ ಎಂದರೆ ಆರೋಗ್ಯ ಇವುಗಳನ್ನು ಉಪದೇಶಿಸುವದು; ಮತ್ತು ಅದು ನಿಜವಾಗಿಯೂ ಗೆಲ್ಲುವದು.

ಜನಾಂಗದ ಆರೋಗ್ಯಕ್ಕೂ ಸುಖಕ್ಕೂ ತಂದೆಯ ಆರೋಗ್ಯ--ಬಲಗಳು ಅತ್ಯಾವಶ್ಯಕವಾಗಿರುವಷ್ಟೇ ತಾಯಿಯ ಆರೋಗ್ಯ--ಬಲಗಳೂ ಅಗತ್ಯವಾಗಿವೆ. ಗಂಡಸು ಕಸುವುಳ್ಳ ಜಟ್ಟಿಯಾಗಿರಬೇಕು, ಹೆಂಗಸು ಸುಕುಮಾರಿ ಗೊಂಬೆಯಾಗಿರಬೇಕು ಎಂದು ಬಗೆಯುವದು-ಬಯಸುವದು ತೀರ ಮೂರ್ಖತನವೇ ಸರಿ. ಅದರಂತೆ ಅವಳಿಗೆ ಮಾನಸಿಕ ದೌರ್ಬಲ್ಯವನ್ನು ವಿಧಿಸುವದಾದರೂ- ಇಂದ್ರಿಯ ಸೌಖ್ಯಗಳನ್ನು ಉತ್ಕಟವಾಗಿ ಅನುಭವಿಸುವದು. ಶಾಸ್ತ್ರೀಯ ವಿಷಯಗಳ ವಿಶೇಷ ಭೌತಿಕ ವಿಷಯಗಳ ಅಭ್ಯಾಸವನ್ನು ಮಾಡುವದು ಹೆಂಗಸಿಗೆ ಯೋಗ್ಯವಲ್ಲವೆಂದು ಕಟ್ಟು ಹಾಕುವದಾದರೂ- ಮೂರ್ಖತನವು. ಈ ತೆರನಾದ ಬಂಧನಗಳಿಂದ ಸ್ತ್ರೀಯ ಕಾರ್ಯಕ್ಷೇತ್ರವು ವಿಶಾಲವಾದ ಅದ್ಭುತವಾದ ಈ ಪ್ರಪಂಚದಲ್ಲಿ ಪ್ರಜನನದ ಮಟ್ಟಿಗೆ ಮರ್ಯಾದಿತವಾಗಿ, ಅವಳ ಸ್ವಭಾವವೇ ಆರೋ

ಗ್ಯಕ್ಕೆ ಮತ್ತು ಮಾನಸಿಕ ಶಕ್ತಿಗೆ ವಿಪರೀತವಾದದ್ದಾಗಿದೆ; ಹೇಡಿಯಾಗಿದೆ, ಅನಿಶ್ಚಿತವಾಗಿದೆ; ಉನ್ಮಾದಕ (hysterical)

ಆಧ್ಯಾತ್ಮಿಕ ನೀತಿ ಶಾಸ್ತ್ರಜ್ಞನು ಮನುಷ್ಯನ ಹಾಗು ಮಿಕ್ಕ ಪ್ರಾಣಿಗಳ ಮನಸುಗಳು ತೀರ ಭಿನ್ನವಾಗಿರುವವೆಂದು ಹೇಳುತ್ತಿರುವನು. ಇದು ಶುದ್ಧ ತಪ್ಪು. ಈ ಬಗೆಯ ಸಿದ್ಧಾಂತವನ್ನು ಕಟ್ಟುವಷ್ಟು, ವಿವಿಧ ತೆರನಾದ ಮನಸುಗಳ ತುಲನಾತ್ಮಕ ಅಭ್ಯಾಸವೇ ಆಗಿರುವದಿಲ್ಲ. ಈ ತಪ್ಪು ಕಲ್ಪನೆಯಿಂದ ಹಾಕಿದ ನೈತಿಕ ನಿರ್ಬಂಧಗಳು ಪರಿಣಾಮವಾದಲ್ಲಿ ಹಿತಕಾರಿಯಾಗಲಾರವು. ಮೇಲೆ ಮೇಲೆ ಒಡೆದು ಕಾಣುವ ಆಹಾರ ನಿದ್ರಾದಿಗಳ ವಿಷಯವನ್ನೇ ಉದಾಹರಣೆಗಾಗಿ ತೆಗೆದುಕೊಳ್ಳೋಣ. ಹಸಿವೆಂಬ ಪ್ರಕೃತಿ ಧರ್ಮವು; ದೇಹಕ್ಕೆ ಆಹಾರದ ಅಗತ್ಯವುಂಟೆಂಬುದಕ್ಕೆ ನಿದರ್ಶನವು. ಅಧ್ಯಾತ್ಮವಾದಿಗಳು ಇದನ್ನು ಇಂದ್ರಿಯ ಚಾಪಲ್ಯವೆಂದು ತಿಳಿಯುವರು ಹಸಿವೆಯುವನ್ನು ವಿಶೇಷವಾಗಿ ಹೆಂಗಸರ ಹಸಿವೆಯನ್ನು ಕುಗ್ಗಿಸಲು ಯತ್ನಿಸುವರು. ಇದರಂತೆ ಎಲ್ಲ ಇಂದ್ರಿಯ ಸುಖಗಳಿಗೂ ಇವರು ತಡೆಹಾಕುತ್ತಿರುವರು. ಇಂದ್ರಿಯಗಳ ತೀವ್ರತೆಗಳು ಶೈಹಿಕ ಮಾನಸಿಕ ಸುಖ ಸ್ವಾಸ್ಥ್ಯಗಳಿಗಾಗಿ ಅಗತ್ಯವಾದ ದೊಡ್ಡ ಗುಣಗಳೆಂದು ಅವರು ಮನ್ನಿಸುವದಿಲ್ಲ, ಅವನ್ನು ಪಶುವೃತ್ತಿಗಳೆಂದು ಹೀಗಳೆಯುವರು. ಇದು ಶುದ್ಧ ತಪ್ಪು. ಅವು ಅಭಿಮಾನಾಸ್ಪದವಾದ ಸದ್ಗುಣಗಳಾಗಿರುವವು ಒಳ್ಳೇ ಹಸಿವೆಯಿಲ್ಲದ ಗಂಡಸಾಗಲಿ, ಹೆಂಗಸಾಗಲಿ ನಿಂದ್ಯರು ಮತ್ತು ಪಾಪಿಗಳು.

ನಮ್ಮೆಲ್ಲರ ಕಣ್ಣುಗಳಿಗೆ ಸ್ವಲ್ಪ ಹೆಚ್ಚುಕಡಿಮೆ ಅಧ್ಯಾತ್ಮದ ಕಾಮಣಿಯಾಗಿದೆ; ಅದಕ್ಕೇ ನಮಗೆ ತನ್ನದಾಗಿದ್ದ ಪ್ರಪಂಚವೂ ಸರಿಯಾಗಿ ಕಾಣುವದಿಲ್ಲ ಸುಕುಮಾರಿತೆ, ಮಾರ್ದವ, ವಿನಯ, ಒಯ್ಯಾರ ಇವು ನಿಜವಾಗಿ ಸ್ತ್ರೀಯರ ಸೌಂದರ್ಯದ ಲಕ್ಷಣಗಳಲ್ಲ. ಸೌಂದರ್ಯದ ವಿಕಾಸವು ನಿಜವಾಗಿ ಆರೋಗ್ಯ, ಸಾಮರ್ಥ್ಯ, ಒಳ್ಳೆಯ ಸಂಸ್ಕೃತಿ ಇವುಗಳನ್ನವಲಂಬಿಸಿರುವದು. ಗಂಡಸು ಗಡ್ಡ ಮೀಸೆಗಳನ್ನು ಬೋಳಿಸುವದು ಪ್ರಕೃತಿಧರ್ಮಕ್ಕೆ ವಿರುದ್ಧವಾಗಿರುವದು. ಮುಖದ ಮೇಲಿನ ಕೂದಲುಗಳು ಗಂಡಸಿನ ಸೌಂದರ್ಯ ವಿಶೇಷವಾಗಿರುವವು. ಅವು ಅವನ ಪೌರುಷವನ್ನೂ ಘನತೆಯನ್ನೂ ಹೆಚ್ಚಿಸುತ್ತಿರುವವು. ಅವು ಅವನ ಹರಯದ

ಕುರುಹುಗಳು ; ಗಡ್ಡವು 'ಇವನು ಹುಡುಗನಲ್ಲ, ಪ್ರಜೋತ್ಪಾದನ ದೃಷ್ಟಿಯಿಂದ ಪರಿಪಕ್ವನಾಗಿರುವನು' ಎಂದು ತೋರಿಸುವದು. ಗಡ್ಡಮೀಸೆಗಳನ್ನು ಬೋಳಿಸುವದರಿಂದ ಅವನ ಮುಖದ ಮೇಲೆ ಹೆಣ್ಣುಕಳೆ ಸುರಿಯುವದು; ಅದರಿಂದ ಗಂಡು ಹೆಣ್ಣಿನ ವ್ಯತ್ಯಾಸದಿಂದುಂಟಾಗತಕ್ಕ ಆಕರ್ಷಣವು ಕಡಿಮೆಯಾಗುವದು; ಹೆಚ್ಚಾಗತಕ್ಕ ಕಾಮವಾಸನೆ ಕುಗ್ಗುವದು. ಇದರಿಂದ ನಮ್ಮ ಪೌರುಷವೂ ಉತ್ಸಾಹವೂ ಮೊಂಡಾಗಿರುವದು.



ಶಂತನು-ಸತ್ಯವತಿ

ಈ ಚಿತ್ರದಲ್ಲಿ ಈಗಿನ ಕಾಲದ ಸೌಂದರ್ಯದ ಕಲ್ಪಕ ವಿಧಾನಗಳು ಕಾಣಲಾರವು.

# ಲೈಂಗಿಕ ಧರ್ಮ



**ಜನನ ಮತ್ತು ವೃದ್ಧಿ**

ನಾವು ಸದ್ಯಕ್ಕೆ ವಿಚಾರಿಸಬೇಕಾದ ಹೆಚ್ಚು ಮಹತ್ವದ ವಿಷಯಗಳೆಂದರೆ ಜನನೇಂದ್ರಿಯ ಧರ್ಮ, ಮತ್ತು ಸ್ವರೂಪ, ಅವುಗಳ ಬೇನೆಗಳು, ಬಡತನದ ಹಾಗೂ ಅತಿಶ್ರಮದ ದುಷ್ಪರಿಣಾಮಗಳು. ಆದರೆ ದುರ್ದೈವದ ಸಂಗತಿಯೆಂದರೆ ಈ ವಿಷಯಗಳ ಬಗ್ಗೆ ದುರ್ಲಕ್ಷ್ಯವಾದಷ್ಟು ಯಾವುಗಳ ಬಗ್ಗೆಯೂ ಆಗಿಲ್ಲ; ಇವುಗಳ ಬಗ್ಗೆ ಅಜ್ಞಾನವು ಆವರಿಸಿದಷ್ಟು ಯಾವುಗಳ ಬಗ್ಗೆಯೂ ಆವರಿಸಿಲ್ಲ. ನಿಜವಾಗಿ, ಮನುಷ್ಯನ ಹಿತಾಹಿತಗಳೊಡನೆ ಇವುಗಳಷ್ಟು ನಿಕಟವಾಗಿ ಆಳವಾಗಿ ಸಂಬಂಧಪಟ್ಟ ವಿಷಯ ಬೇರೊಂದಿರುವದಿಲ್ಲ. ಈ ಲೈಂಗಿಕ ವಿಷಯದ ಬಗ್ಗೆ ನಮ್ಮನ್ನಾವರಿಸಿದ ಅಜ್ಞಾನ, ಗೌಪ್ಯ, ನಾಚಿಕೆ ಇವುಗಳಿಂದ ನಮ್ಮಿಡೀ ನೈತಿಕ ಹಾಗೂ ಸಾಮಾಜಿಕ ತತ್ವಜ್ಞಾನದ ಬೇರಿಗೇ ಹುಳಹತ್ತಿದಂತಾಗಿದೆ; ಇದರಿಂದ ಮಾನವಪ್ರಗತಿಯೇ ಕುಗ್ಗುತ್ತಲಿದೆ. ಜನಾಂಗವಿಷಯಕ ಧರ್ಮಕರ್ಮಾದಿಗಳ ಬಗ್ಗೆ ತಿರಸ್ಕಾರ ನಾಚಿಕೆಯ ಭಾವನೆಗಳು ಮನುಷ್ಯನ ಘನತೆಗೂ ಪ್ರಕೃತಿಯ ಪೂರ್ಣತ್ವಕ್ಕೂ ಕುಂದುತರುವವು.

ಪ್ರಕೃತಿಯು ತನ್ನಕಾರ್ಯದ ಹಾಗೂ ಕಟ್ಟಳೆಗಳ ಅಭ್ಯಾಸವನ್ನು ಪ್ರತಿಯೊಬ್ಬನು ಮಾಡಬೇಕೆಂದು ಅಪೇಕ್ಷಿಸುವದು. ಗೌಪ್ಯವಾದ ಅಥವಾ ನಾಚಿಕೊಳ್ಳುವಂಥ ವಿಷಯವು ಯಾವದೂ ಇಲ್ಲ. ಜನನೇಂದ್ರಿಯಗಳ ವಿಷಯಗಳು ಅಶ್ಲೀಲವೆಂಬ ಭಾವನೆಯನ್ನು ನಾವು ತ್ಯಜಿಸಲೇ ಬೇಕು. ಕಣ್ಣು, ಮೂಗು, ಬಾಯಿ ಇತ್ಯಾದಿಗಳ ವಿಷಯವನ್ನು ಅರಿತು ಕೊಂಡ

ಜನನೇಂದ್ರಿಯಗಳ ವಿಷಯವನ್ನು ಬಿಟ್ಟುಬಿಟ್ಟರೆ, ಶರೀರಗುಣಧರ್ಮ ಶಾಸ್ತ್ರದ ಜ್ಞಾನವು ಪೂರ್ಣವಾಗಲಾರದು; ಮತ್ತು ಆಜ್ಞಾನದಿಂದ ನಮ್ಮ ಹಿತವೂ ಸಾಧಿಸದು. 'ಬಾಹ್ಯಚಟಗಳಂತೆ ಜನನ ಪ್ರವೃತ್ತಿಯಾದರೂ ಒಂದು ಚಟ, ಅದನ್ನು ತಡೆಯುವದರಿಂದ ಏನೂ ಅಪಾಯವಿಲ್ಲ' ಎಂದು ಪುರಾಣ ಮತವಾದಿಗಳ ಕಲ್ಪನೆ. ಆದರೆ ಪ್ರತಿಯೊಂದು ಪ್ರಾಣಿಯಲ್ಲಿ ಜನ್ಮ ಕಾಲದಲ್ಲಿಯೇ ತಾಯಿತಂದೆಗಳಿಂದ ಜನನ ಪ್ರವೃತ್ತಿಯ ಬೀಜಾರೋಪಣೆ ಯಾಗಿರುತ್ತದೆ; ಮುಂದೆ ಅದು ಪ್ರಬಲ ಶಕ್ತಿಯಾಗಿ ಬೆಳೆದು ತನ್ನ ತದ್ರೂಪವಾದ ಪ್ರಾಣಿಗಳನ್ನು ಹುಟ್ಟಿಸಲು ಯತ್ನಿಸುವದು. ಇಲ್ಲವಾದರೆ ಪ್ರಾಣಿ ವರ್ಗವು ನಷ್ಟವಾಗಬಹುದಾಗಿತ್ತು. ಜೀವಿತವೂ ಜನನ ಪ್ರವೃತ್ತಿಯೂ ವಿರುದ್ಧ ಗುಣಧರ್ಮದವಾಗಿವೆ. ಜೀವಿತವು ಕ್ಷಯಹೊಂದುತ್ತದೆ, ಜನನ ಪ್ರವೃತ್ತಿಯು ಅನ್ಯರಲ್ಲಿ ಆಶಕ್ತಿಯನ್ನು ನೆಲೆಗೊಳಿಸಿ ಅಮರವಾಗುತ್ತದೆ.

ಮಾನವೇತರ ಪ್ರಾಣಿಗಳಲ್ಲಿ ವಸಂತಋತುವಿನಲ್ಲಿ ಜನನ ಪ್ರವೃತ್ತಿಯು ವಿಶೇಷವಾಗಿ ಹೆಚ್ಚಾಗುವದು. ಆಗ ಅವುಗಳಲ್ಲಿ ಪುಂಬೀಜಾಣುಗಳು ವಿಪುಲವಾಗಿರುವವು. ಇತರ ಋತುಗಳೊಳಗೆ ಅವು ಬಾಡಿ ನಿಷ್ಕ್ರಿಯವಾಗಿರುವವು. ಸ್ತ್ರೀಬೀಜಾಣುಗಳು ಪರಿಪಕ್ವವಾದಾಗ ಪ್ರಜನನಕ್ಕೆ ಸಮರ್ಥವಾಗುವವು; ಆವಾಗ ಬೆದೆ ಬರುವದು. ಆ ಕಾಲದಲ್ಲಿ ಮಾತ್ರವೇ ಆ ಹೆಣ್ಣುಗಳು ಗಂಡನ್ನು ತಮ್ಮ ಹತ್ತಿರ ಬರಗೊಡುವವು. ಮಾನವ ಜಾತಿಯ ಹೆಣ್ಣಿನಲ್ಲಿ ಮುಟ್ಟಾದ ಮೇಲೆ ಜನನ ಪ್ರವೃತ್ತಿಯು ತೀವ್ರವಾಗುವದು. ಆದರೆ ಅವಳಿಗೆ ಕೇವಲ ವಸಂತರ್ತುವಿನಲ್ಲಿ ಸಂಭೋಗವನ್ನು ಅನುಭವಿಸಬಲ್ಲಳೆಂಬ ವಿಶಿಷ್ಟ ನಿರ್ಬಂಧವಿರುವದಿಲ್ಲ. ಈ ಸೌಖ್ಯವನ್ನೂ ಅನುಭವಿಸುವ ವರದಾನವನ್ನು ವಿವೇಕ ಆತ್ಮಸಂಯಮಾದಿ ಗುಣಗಳುಳ್ಳ ಮಾನವನಿಗೆ ಪ್ರಕೃತಿಯು ಕೆವಟ್ಟಿರುವದು.

ಪ್ರಜನನ ಶಕ್ತಿಯು ಗಂಡಸಿಗಿಂತ ಹೆಂಗಸಿನಲ್ಲಿ ಬಹಳ ಬೇಗನೆ ಕುಗ್ಗುವದು. ಸಾಧಾರಣವಾಗಿ ೪೫-೫೦ ವರ್ಷಗಳ ವಯಸ್ಸಿನೊಳಗೆ ಅವಳ ಅಂಡೋತ್ಪತ್ತಿಯು ಬಹುಶಃ ಕೊನೆಗಾಣುವದು. ಆದರೆ ಅವಳ ಕಾಮೇಚ್ಛೆಯಾಗಲಿ ಬತ್ತಿಹೋಗುವದಿಲ್ಲ. ಗಂಡಸಿನ ಹಡೆಯುವ ಶಕ್ತಿಯು

ಹೆಚ್ಚು ಆಯುಷ್ಮಂತವಾದದ್ದು; ಅವನ ಪ್ರಕೃತಿಯು ಸರಿಯಾಗಿದ್ದರೆ ತೀರ ಮುಪ್ಪಾಗುವ ವರೆಗೂ ಇರುವದು. ಮುಪ್ಪಿನಲ್ಲಿ ರತಿಕ್ರೀಡಾಸಕ್ತಿಯು ತೀವ್ರ ವಾಗಿರುವವನನ್ನು ಜನರು ಹೀಯಾಳಿಸುತ್ತಿರುವರು; ಆದರೆ ನಿಜವಾಗಿಯೂ ಅದು ಆ ಮುದುಕನ ಜೀವನವು ಅತ್ಯಂತ ಆರೋಗ್ಯ ಸಂಪನ್ನವಾದುದೆಂಬುದಕ್ಕೆ ಪ್ರತ್ಯಕ್ಷಪ್ರಮಾಣವಾಗಿರುವದು. ಆಶಕ್ತಿ, ಆ ಇಚ್ಛೆ ಅಕಾಲದಲ್ಲಿ ಕುಗ್ಗುವದು ಮನುಷ್ಯನಿಗೆ ಕುಂದು. ಅವು ಬಹುಕಾಲ ಬಾಳಿದಷ್ಟು ಮನಷ್ಯನ ಘನತೆ ಹೆಚ್ಚುವದು.

ಇತ್ತಿತ್ತಲಿನ ಅಂಗವಿಚ್ಛೇದ ಶಾಸ್ತ್ರಜ್ಞರು ( anatomists ) ಅಂಗೀಕರಿಸಿರುವ ತತ್ವದ ಮೇರೆಗೆ ಮನುಷ್ಯನು ಅರ್ಧನಾರೀ ನಟೇಶ್ವರನಾಗಿರುವನು; ಎಂದರೆ ಗಂಡು-ಹೆಣ್ಣು ಜನನೇಂದ್ರಿಯಗಳೆರಡೂ ಉಳ್ಳ ಪ್ರಾಣಿ. ಗಂಡಸಿನಲ್ಲಿ ಕೆಲವೊಂದು ಇಂದ್ರಿಯಗಳು ವಿಕಾಸಹೊಂದಿರುವವು, ಹೆಂಗಸಿನಲ್ಲಿ ವಿಕಾಸಹೊಂದದೆ ಉಳಿಯುವವು. ಹೆಂಗಸಿನ ಯೋನಿಯೊಳಗಿನ ಮಕರಧ್ವಜವು ಅವಳ ಬೆಳಿಗೆ ಹೊಂದದ ಶಿಶ್ನವಾಗಿದೆ! ಅದರಂತೆ ಗಂಡಸಿನಲ್ಲಿಯ.. ... (prostute) ಗ್ರಂಥಿಯೊಳಗಿನ ( Sinuo Poculario ) (....... ....) ಎಂಬ ಪೊಳ್ಳು ಅವನ ಗರ್ಭಕೋಶವು! ಹೀಗೆ ಮೂಲತಃ ಗಂಡು ಹೆಣ್ಣು ಅಭಿನ್ನವಾಗಿರುವವು. ಸೃಷ್ಟಿಯ ವಿಕಾಸಕ್ರಮವನ್ನನುಸರಿಸಿ ಇವೆರಡೂ ರೂಪದಲ್ಲಿ ಬೇರ್ಪಟ್ಟಿರುವವಾದರೂ ವಿಚಾರ-ಬುದ್ಧಿ ಮೊದಲಾದವುಗಳಲ್ಲಿ ಹೆಣ್ಣು ಕೀಳೆಂದು ಬಗೆದು ಹೆಣ್ಣನ್ನು ಗಂಡಿನ ದಾಸ್ಯದಲ್ಲಿಡುವದಾಗಲಿ, ಗಂಡು-ಹೆಣ್ಣುಗಳಿಗೆ ಬೇರೆ ಬೇರೆ ಧರ್ಮಕರ್ಮಗಳನ್ನು ವಿಧಿಸುವದಾಗಲಿ ಶುದ್ಧ ತಪ್ಪಾಗಿರುವದು.

ಮಾನವ ಜಾತಿಯೆಂದರೆ ತೀರ ಸ್ವತಂತ್ರವಾದ ವಿವಿಧ ವ್ಯಕ್ತಿಗಳ ಒಂದು ಗುಂಪಲ್ಲ; ಗಂಡು ಹೆಣ್ಣುಗಳ ಸತ್ವಗಳ ಮಿಶ್ರಣದಿಂದ ಪ್ರಜೋತ್ಪತ್ತಿಯಾಗಿ ಬೆಳೆದ ಒಂದು ದೊಡ್ಡ ಕುಟುಂಬ. ಮದುವೆಯ ಮೂಲಕ ಭಿನ್ನ ಭಿನ್ನ ವ್ಯಕ್ತಿಗಳು ಆಗಾಗ್ಗೆ ಒಂದಾಗುತ್ತಿರುವದರಿಂದ, ಪ್ರಜಾ ಸಂಖ್ಯೆಯು ಮೊದಲಿಬ್ಬರಿಂದ ಪ್ರಾರಂಭವಾಗಿ ಕಾಲಕ್ರಮದಲ್ಲಿ ಅಸಂಖ್ಯವಾಗಿ ಬೆಳೆದಿರುವದರಿಂದ ನಾವೆಲ್ಲರೂ ತತ್ವತಃ ಒಂದೇ ಆಗಿರುವೆವು. ಮತ್ತು ಮರಣದಿಂದ ನಮ್ಮ ದೃಶ್ಯಾಂಗಗಳು ಇಲ್ಲದಂತಾದರೂ ಮಕ್ಕಳ

ರೂಪದಿಂದ ನಮ್ಮ ಕೆಲವೊಂದು ಅಂಶವು, ಅದೃಶ್ಯ ಶಕ್ತಿಯು ಜೀವಂತ ವಾಗಿ ಉಳಿಯುವದರಿಂದ ಒಂದು ರೀತಿಯಿಂದ ನಾವು ಅಮರರೆಂದೇ ಹೇಳಬಹುದು. ಆದ್ದರಿಂದ ನಾವು ಈ ಪ್ರಪಂಚದಲ್ಲಿ ಗಂಡು ಹೆಣ್ಣುಗ ಳಲ್ಲಿ ಉಚ್ಚನೀಚ ಭೇದಭಾವವನ್ನಿಡದೆ ವ್ಯವಹರಿಸಿದರೆ ಮಾನವ ಕುಟುಂ ಬವು ಸುಖಿಯಾಗುವದು.

ಗಂಡು ಹೆಣ್ಣುಗಳ ಸತ್ವಸಾರಗಳ ಮಿಶ್ರಣದಿಂದ ಮಕ್ಕಳಾಗುವದ ರಿಂದ ಅವು ಇಬ್ಬರ ಗುಣದೋಷಗಳ ಪ್ರತೀಕವಾಗುವವು. ಆದ್ದರಿಂದ ಒಬ್ಬರು ಪವಿತ್ರರು ಒಬ್ಬರು ಅಪವಿತ್ರರು ಆಗಿದ್ದರೆ ಮಕ್ಕಳು ಪವಿತ್ರರಾಗ ಲಾರರು. ಸ್ತ್ರೀ ಪುರುಷರಿಬ್ಬರ ಸರಿಸಮಾನವಾದ ವಿಕಾಸವೇ ಮಕ್ಕಳ ವಿಕಾಸವು ; ಇಬ್ಬರ ಪರಿಪೂರ್ಣತೆಯೇ ಮಕ್ಕಳ ಪರಿಪೂರ್ಣತೆ. ಮಕ್ಕ ಳ ವಿಕಾಸವೇ ರಾಷ್ಟ್ರದ ವಿಕಾಸವು. ಆದ್ದರಿಂದ ಹೆಂಗಸಿನ ವಿಷಯದಲ್ಲಿ ಸಾಶಂಕವೃತ್ತಿ, ಹೇಯ-ಕಲ್ಪನೆ, ಅದರಿಂದ ಅವಳಿಗೆ ದಾಸ್ಯಬಂಧನ, ಅವ ಳ ಪರಾವಲಂಬನೆ ಇವುಗಳು ಸಮುಂಜದ ವಿಕಾಸಕ್ಕೆ ಹಗೆಗಳಾಗಿವೆ. ಮಾನವ ಜಾತಿಯ ಸತ್ವಹ್ರಾಸಕ್ಕೆ ಅಥವಾ ಅಸುಖಕ್ಕೆ ಕಾರಣವಾದ ಬೇನೆ ಗಳು, ವಿಶೇಷತಃ ಜನನೇಂದ್ರಿಯಗಳ ಬೇನೆಗಳು ಕೆಲವೊಂದು ಸಾಮಾ ಜಿಕ ಲೋಪದೋಷಗಳಿಂದ ಉಂಟಾಗುತ್ತಿರುವವು. ಆದ್ದರಿಂದ ನಮ್ಮ ವೈದ್ಯ ಶಾಸ್ತ್ರವೂ ನೀತಿಶಾಸ್ತ್ರವೂ ರೋಗದ ಆಮೂಲವನ್ನೇ ಕಿತ್ತುಹಾಕ ಬೇಕು. ಇಲ್ಲದಿದ್ದರೆ ಹೊಟ್ಟೆಗೆ ಅನ್ನವಿಲ್ಲದೆ ಸೊರಗುವವನಿಗೆ ಕೊಟ್ಟ ಪೌಷ್ಟಿಕ ಔಷಧದಂತೆ ಬಾಹ್ಯೋಪಚಾರಗಳು ವ್ಯರ್ಥವಾಗುವವು.

## ಜನನೇಂದ್ರಿಯಗಳ ರೋಗಗಳು

ಹರೆಯ ಬಂದ ಬಳಿಕ ಗಂಡಸಿಗಾಗಲಿ ಹೆಂಗಸಿಗಾಗಲಿ ಜನನೇಂದ್ರಿ ಯಗಳ ಬೇನೆಗಳು ಬರುವ ಸಂಭವವು ಹೆಚ್ಚಾಗಿರುವದು. ಹರಯದೊ ಳಗಿನ ಮೊದಲಿನ ವರುಷೆರಡು ವರುಷಗಳನ್ನು ಬಿಟ್ಟರೆ ಮುಂದಿನ ಕಾಲವು ಬಹಳ ಘಾತಕವಾಗಿರುವದು ಈಗಿನ ಸಮಾಜದಲ್ಲಿ ಕಂಡುಬರು ತ್ತದೆ. ಘಾತಕವೆಂದರೆ ಆ ಕಾಲದಲ್ಲಿ ತರುಣರು ಸತ್ತೇಹೋಗುವರೆಂದಲ್ಲ; ಅವರ ದೇಹವು ಬೇನೆಗಳ ತವರುಮನೆಯಾಗುವದು. ಮನುಷ್ಯನ ಸುಖ ದುಃಖಗಳಿಗೆ ಕಾರಣಗಳಾದ ಪ್ರಬಲ ಶಕ್ತಿಗಳಾದ ಜನನೇಂದ್ರಿಯಗಳು

ಹರೆಯದಲ್ಲಿ ತಮ್ಮ ಲೀಲೆಗಳನ್ನು ಪ್ರಾರಂಭವಿಸುವವು. ಅವುಗಳ ವಿಷಯದಲ್ಲಿ ತರುಣರು ಶೋಚನೀಯವಾದ ಅಜ್ಞಾನದಲ್ಲಿರುವದರಿಂದ ಹೇಯ ಭಾವನೆಯುಳ್ಳವರಾಗಿರುವದರಿಂದ ದುಃಖಕ್ಕೀಡಾಗುತ್ತಿರುವರು, ಮತ್ತು ಭಾವೀಮಾನವ ಪ್ರಪಂಚವನ್ನು ನಷ್ಟಕ್ಕೆ ಗುರಿಮಾಡುತ್ತಿರುವರು.

ಹರೆಯದ ಕಾಲಕ್ಕೆಎಂದರೆ ೧೫—೧೬ ನೆಯ ವರ್ಷದ ವಯಸ್ಸಿನಲ್ಲಿ ವೀರ್ಯೋತ್ಪತ್ತಿಯಾಗಿ ಕಾಮವಿಕಾರಗಳು ಹುಟ್ಟುತ್ತವೆ. ಭಿನ್ನಲಿಂಗಿ ವ್ಯಕ್ತಿಗಳೊಳಗೆ ಪರಸ್ಪರಾಕರ್ಷಣೆಗೆ ಆರಂಭವಾಗುತ್ತದೆ ಇದಕ್ಕೆ ನಾವು ವಿಕಾರವೆಂದೂ ಆ ಬಗ್ಗೆ ಸಹಾನುಭೂತಿ ತೋರಿಸುವದು ವಿಕಾರವಶತೆಯೆಂದೂ ತಿಳಿಯುತ್ತೇವೆ, ಆ ವಿಕಾರವು ಪಾಶವೀಯ ಪ್ರವೃತ್ತಿಯೆಂದು ಹತ್ತಿಕ್ಕಲು ಪ್ರಯತ್ನಿಸುತ್ತೇವೆ, ಇದರಿಂದ ತರುಣನ ಇಡೀ ದೇಹವೇ ಅಸ್ವಸ್ಥವಾಗಿ ಬೇನೆಗೆ ತುತ್ತಾಗುವ ಸಂಭವವಿರುತ್ತದೆ. ಆದ್ದರಿಂದ ಆ ಕಾಲದಲ್ಲಿ ಗಂಡು ಹೆಣ್ಣುಗಳು ಮಿತ್ರಭಾವನೆಯಿಂದ ಕೂಡಿ ಮನರಂಜನೆಯ ಆಟ ಪಾಟಗಳಲ್ಲಿ ತೊಡಗಿ ಆ ಆಕರ್ಷಣೆಯ ವಿಕಾಸಕ್ಕೆ ಆಸ್ಪದ ಕೊಡಬೇಕು. ಇಬ್ಬರೂ ಪರಸ್ಪರ ಗುಣಸ್ವಭಾವಗಳನ್ನು ಅರಿತುಕೊಂಡು ಆ ಆಕರ್ಷಣೆಯನ್ನು ಪ್ರೇಮೀಕರಿಸಿ ಸಮರಸವಾದ ಭಾವೀದಾಂಪತ್ಯ ಜೀವನಕ್ಕೆ ತಳಹದಿ ಹಾಕುವ ಕಾಲವೆಂದರೆ ಇದೇ. ಈ ತೆರನಾದ ಮಿಲನವಿಲ್ಲದೆ ಬರೀ ಗುಣಾವಗುಣಗಳ ಮೇಲಿಂದ ಆ ಸುಖದ ಸರಿಯಾದ ವಿಮರ್ಶೆ ಮಾಡುವದು ತಪ್ಪು. ತರುಣರ ಆರೋಗ್ಯಕ್ಕೂ ಸುಖಕ್ಕೂ ಸಾಮಾಜಿಕ ಸ್ವಾಸ್ಥ್ಯಕ್ಕೂ ಅಗತ್ಯವಾದ ವಿವಾಹ ಪೂರ್ವದ ಸ್ತ್ರೀ-ಪುರುಷ ಸ್ನೇಹಕ್ಕೆ ನಮ್ಮಲ್ಲಿ ಆಸ್ಪದವೇ ಇಲ್ಲ. ನಮ್ಮ ನೀತಿವೇದಾಂತದ ತಪ್ಪು ಕುಕಲ್ಪನೆಗಳು ತರುಣರ ಮಾನಸಿಕ ಯೋಗ್ಯತೆಯನ್ನು ನಷ್ಟ ಮಾಡಿರುವದರಿಂದ ಅವರು ಆ ಸ್ವಾರಸ್ಯವಾದ ಜೀವನವನ್ನು ಜೀವಿಸಲು ಅಸಮರ್ಥರಾಗಿರುವರು.

ಕಣ್ಣಿಗೆ ನೋಡುವದು, ಕಾಲಿಗೆ ನಡೆಯುವದು, ಬುದ್ಧಿಗೆ ವಿಚಾರ ಮಾಡುವದು ಸ್ವಾಭಾವಿಕ ಗುಣಧರ್ಮವಾಗಿರುವಂತೆ ಜನನೇಂದ್ರಿಯಗಳಿಗೆ ಪ್ರಜನನವು ಸ್ವಾಭಾವಿಕ ಗುಣಧರ್ಮವು. ಆ ಆ ಇಂದ್ರಿಯಗಳನ್ನು ಅವುಗಳ ಗುಣಧರ್ಮದ ಮೇರೆಗೆ ಸರಿಯಾಗಿ ಉಪಯೋಗಿಸಿ

ತಕ್ಕಷ್ಟು ವ್ಯಾಯಾಮ ಕೊಡುವದರಿಂದ ಅವು ಸದೃಢವೂ ನೀರೋಗಿಯೂ ಆಗುವವು. ಅದರಂತೆ ಜನನಶಕ್ತಿ ಹುಟ್ಟಿದಾಗಿನಿಂದ ನಷ್ಟವಾಗುವವರೆಗೆ ಜನನೇಂದ್ರಿಯಗಳನ್ನು ಸರಿಯಾಗಿ ಉಪಯೋಗಿಸಿಕೊಳ್ಳುವದು ನಮ್ಮ ಕರ್ತವ್ಯವಾಗಿದೆ; ಇದನ್ನು ಅಲ್ಲಗಳೆದರೆ ಅವು ದುರ್ಬಲವಾಗುವವು. ಇಂಥ ಜನನೇಂದ್ರಿಯ ರೋಗಗಳು ವೈದ್ಯಾದಿಗಳು ವಿಧಿಸಬಹುದಾದ ಔಷಧ ವ್ಯಾಯಾಮಾದಿಗಳಿಂದಾಗಲಿ ಧರ್ಮ-ನೀತಿಪರರು ವಿಧಿಸುವ ವಿರಕ್ತಿ-ಅಧ್ಯಾತ್ಮಾಸಕ್ತಿಯಿಂದಾಗಲಿ ನಿಜವಾಗಿ ಹೋಗುವದು ಸಾಧ್ಯವಿಲ್ಲ

ಸಹಜವಾದ ಸ್ತ್ರೀ-ಪುರುಷ ಆಕರ್ಷಣೆಗೆ ಸಮಾಜವು ದಾರಿ ಕೊಡದಿದ್ದುದರ ಪರಿಣಾಮವೆಂದರೆ ಆತ್ಮಘಾತಕವಾದ ಸ್ವಸಂಭೋಗ, ಮುಷ್ಟಿಮೈಥುನ ಮುಂತಾದವುಗಳು. ತರುಣ ತರುಣಿಯರಿಗೆ ಇದು ಸುಖದ ಆಭಾಸವೇ ಹೊರತು, ಸುಖವಲ್ಲ. ತನ್ನನ್ನು ಆಕರ್ಷಿಸಿದ ಅಥವಾ ತನ್ನಿಂದ ಆಕರ್ಷಿತವಾದ ವ್ಯಕ್ತಿಯ ಮಿಲನದಿಂದಾಗುವ ಮನಸ್ತೃಪ್ತಿಯಾಗಲಿ ಪ್ರೇಮವಾಗಲಿ ಇಲ್ಲದಲ್ಲಿ ಸುಖ ಎಲ್ಲಿಂದ ಬರಬೇಕು? ಸ್ತ್ರೀ-ಪುರುಷ ಸಂಭೋಗದಲ್ಲಿ ಕೂಡ ಕಾಮೋದ್ರೇಕವು ನಿಜವಾದುದೂ ತೀವ್ರವಾದುದೂ ಇದ್ದಷ್ಟು ಮನಸ್ಸಿಗೂ ದೇಹಕ್ಕೂ ಉತ್ಸಾಹವಿರುವದು. ಮನುಷ್ಯನ ಮೇಲೆ ಆ ತೃಪ್ತಿಯು ಸುಪರಿಣಾಮವಾಗಬೇಕಾದರೆ, ಆ ವ್ಯಕ್ತಿಗಳಲ್ಲಿಯ ಪರಸ್ಪರ ಪ್ರೇಮವು ಉತ್ಕಟವೂ ನೈಜವೂ ಇರಬೇಕು ಭಯ ಸಂಶಯಗಳಿರಬಾರದು. ವಿಶೇಷವಾಗಿ ಹೆಣ್ಣು ಉದಾಶೀನವಾಗಿರಬಾರದು. ವ್ಯಾಪಾರ ದೃಷ್ಟಿಯಿಂದ, ಸ್ವಾರ್ಥದಿಂದ, ಒತ್ತಾಯದಿಂದ ಪ್ರೇರಿತವಾದ ಪ್ರೇಮದಿಂದ ಸ್ವಾಭಾವಿಕವಾದ ಸೌಖ್ಯವು ಸಿಗಲಾರದು.

ಈ ತೆರನಾದ ಆರೋಗ್ಯದಾಯಕವಾದ ಸಂಭೋಗಶಾಸ್ತ್ರದ ಕಟ್ಟಳೆಗಳಾವವು,! ಅವುಗಳ ಅಜ್ಞಾನದಿಂದ ಅಥವಾ ತಿರಸ್ಕಾರದಿಂದ ಜನನೇಂದ್ರಿಯಗಳ ಮೇಲೆ ಯಾವ ದುಷ್ಪರಿಣಾಮಗಳಾಗುವವು, ಎಂಬದನ್ನು ವಿಚಾರಿಸುವಾ. ಈ ದುಷ್ಪರಿಣಾಮದ ಫಲಗಳಾದ ರೋಗಗಳಿಗೂ ಅತ್ಯಾಚಾರ ಅನಾಚಾರಗಳಿಂದುಂಟಾಗತಕ್ಕ ಜನನೇಂದ್ರಿಯ ಬೇನೆಗಳಿಗೂ ಬಹಳ ವ್ಯತ್ಯಾಸವುಂಟು. ಎಲ್ಲಾ ತರದ ಜನನೇಂದ್ರಿಯ ರೋಗಗಳು ಅಶ್ಲೀಲ

ವೆಂಬ ಭಾವನೆಯಿಂದ ದುರ್ಲಕ್ಷಿಸಲ್ಪಟ್ಟದ್ದರಿಂದ ಬಹಳ ನಷ್ಟವೊದಗಿದೆ. ಆರೋಗ್ಯದ ನಿಯಮಗಳ ಅಜ್ಞಾನದಿಂದ ಬರುವ ಬೇನೆಗಳು ಸಾಂಸರ್ಗಿಕ ವಾಗಿರುವದಿಲ್ಲ; ಅನಾಚಾರದ ಮೂಲಕ ಬರುವ ಬೇನೆಗಳು ಸಾಂಸರ್ಗಿಕ ವಾಗಿ ಹಬ್ಬುತ್ತಿರುವವು.

## ಬ್ರಹ್ಮಚರ್ಯೆಯ ದುಷ್ಪರಿಣಾಮ

ಯಾವಾಗಲೂ ನಮ್ಮ ವಾಸನೆಗಳನ್ನು ಹಾಗೂ ವಿಕಾರಗಳನ್ನು ಸಂಯಮಿಸುವದೇ ಅತ್ಯಂತ ಶ್ರೇಯಸ್ಕರವೆಂದೂ ಪವಿತ್ರವಾದ ಧಾರ್ಮಿಕ ಕರ್ತವ್ಯವೆಂದೂ ತಿಳಿಯುವದು ಮೂರ್ಖತನವೇ ಸರಿ. ಆತ್ಮಸಂಯಮ ನವು ಸದಾಕಾಲವೂ ಸದ್ಗುಣವಾಗಲಾರದು, ಎಷ್ಟೋಸಲ ಅದು ದುರ್ಗು ಣವಾಗಿ ಪರಿಣಮಿಸುವದು. ದೇಹದಲ್ಲಿಯ ಪ್ರತಿಯೊಂದು ಇಂದ್ರಿಯವೂ ಪ್ರತಿಯೊಂದು ಸ್ವಾಭಾವಿಕವಾದ ವಿಕಾರವೂ ಸ್ವಾಭಾವಿಕವಾದ ಉಪ ಯೋಗದಿಂದಲೇ ತೃಪ್ತವಾಗಬೇಕೆಂದು ಪ್ರಕೃತಿಯು ವಿಧಿಸಿರುವದು ಈ ಮೇರೆಗೆ ಸದ್ಯದಲ್ಲಿ ಬಹ್ಮಚರ್ಯೆಯೆಂಬುದು ಬಹುಮಟ್ಟಿಗೆ ದುರ್ಗುಣ ವಾಗಿಯೇ ಪರಿಣಮಿಸತೊಡಗಿದೆ. ಬ್ರಹ್ಮಚರ್ಯೆಯ ಹೆಸರಿನಲ್ಲಿ ಅನೇಕ ಘೋರ ಪಾಪಕೃತ್ಯಗಳು ನಡೆಯತೊಡಗಿವೆ. ತರುಣರು ಬಹುದಿವಸ ಬ್ರಹ್ಮಚಾರಿಗಳಾಗಿ ಇರಲಾರರೆಂದು ಹೇಳಿದ ಮಾತ್ರಕ್ಕೆ ನೀತಿವಂತರು (?) ಒಮ್ಮೆಲೆ ಕೋಪ ತಾಳುವವುಂಟು. ಆಪರೆ ನೀತಿವಂತರೇನು ಬಲ್ಲರು! ಪಾಪ! ಆ ತರುಣರು ಅತೃಪ್ತರೂ ಚಂಚಲಮನಸಿನವರೂ ಆಗಿ ಉತ್ಸಾ ಹವನ್ನೂ ಗಾಂಭೀರ್ಯವನ್ನೂ ಕಳೆದುಕೊಳ್ಳುವರು. ವಿಶೇಷವಾಗಿ ಸೀಡ ಕಸ್ವಭಾವದವರಾಗುವರು. ಚಿಂತೆಯ ಫಲವಾಗಿ ಅಗ್ನಿಮಾಂದ್ಯದ ಮತ್ತ ದರ ಬಳಗದ ರೋಗಗಳನ್ನು ಅನುಭವಿಸುವರು. ತಾವು ಮಾಡಬಯ ಸುವ ಅಭ್ಯಾಸಾದಿಗಳನ್ನೂ ಮಾಡಲಾರದೆ ಶಕ್ತಿಹೀನರಾಗಿ ಕೊರಗುತ್ತ ಹೋಗುವರು. ಏಕಾಂತಪ್ರಿಯರೂ ದುರಾಲೋಚನಪರರೂ ಆಗಿ ಭಿನ್ನ ಲಿಂಗಿಗಳ ಸಹವಾಸದಿಂದ ದೂರಿರಲು ಯತ್ನಿಸುವರು ಅಕಟಾ! ಕಾಲ್ಪ ನಿಕ ನೈತಿಕ ಕಲ್ಪನೆಯ, ಸದಾಚರಣೆಯ-ಸುಪರಿಣಾಮವೆ! ಪಾಪ, ಖಿತ ತರುಣರು ಇದರ ಕಾರಣವನ್ನರಿಯದೆ ಹಾಳಾಗುತ್ತಿರುವರಲ್ಲ!

ತರುಣರ ನಿರುಪಯೋಗಿಯಾದ ಜನನೇಂದ್ರಿಯುಗಳ ನಿರ್ಬಲತೆಯೇ ಈ ದುಃಖಪರಂಪರೆಗೆ ಮೂಲವಾಗಿದೆ. ಆಗಾಗ್ಗೆ ಉಂಟಾಗುವ ಕಾಮೋದ್ರೇಕಗಗಳನ್ನು ತಣಿಸಲು ಆಸ್ಪದವಿಲ್ಲದಿರುವದರಿಂದ ಶಿಶ್ನವು ನಿಸ್ಸತ್ವವಾಗುವದು, ಬತ್ತುವದು; ಅಂಡಗಳು ಮೃದುವಾಗುವವು, ಅಥವಾ ಅಪವಾದವಾಗಿ ತೀರ ಬಾಡಿಹೋಗುವವು. ಇಂದ್ರಿಯ ಶಕ್ತಿಯ ದ್ಯೋತಕಗಳಾದ ಕಾಮೋದ್ರೇಕಗಳು ಕ್ರಮಶಃ ನಷ್ಟವಾಗುವವು; ಮತ್ತು ಅನೈಚ್ಛಿಕವಾಗಿ ಸ್ವಪ್ನದಲ್ಲಿ ವೀರ್ಯಸ್ಖಲನವಾಗುವ ಚಟವು ಅಂಟುವದು. ನಿರೋಗಿ ಮನುಷ್ಯನಿಗೂ ಯಾವಾಗಾದರೊಮ್ಮೆ ಸ್ವಪ್ನಸ್ಖಲನವಾಗುವದುಂಟು; ಆದರೆ ಅದು ದೇಹದ ಮೇಲೆ ಕೆಟ್ಟಪರಿಣಾಮವನ್ನುಂಟುಮಾಡುವದಲ್ಲ, ಅದು ರೋಗದ ಲಕ್ಷಣವಲ್ಲ; ಇಂದ್ರಿಯಗಳು ಹಾದಿಗೆ ಬಂದಿದ್ದು ಅವುಗಳನ್ನು ತೃಪ್ತಿಗೊಳಿಸುವ ಅಗತ್ಯವನ್ನು ಸೂಚಿಸುವದು. ಆದರೆ ಆಸ್ಖಲನವು ಮೇಲಿಂದ ಮೇಲೆ ಆಗುತ್ತಿದ್ದರೆ, ಅದರಿಂದ ದೌರ್ಬಲ್ಯವುಂಟಾಗುತ್ತಿದ್ದರೆ, ಅದು ರೋಗವು. ಯಾವಾಗಾದರೊಮ್ಮೆ ಆಗುವ ವೀರ್ಯಸ್ಖಲನಕ್ಕಾಗಿ ಬೆದರುವದಾಗಲಿ, ಬೆದರಿಸುವದಾಗಲಿ ತಪ್ಪು, ಇದೊಂದು ರೋಗವೆಂದು ತಿಳಿದು ತರುಣರು ಬಹುಶಃ ಅನೇಕ ಡಾಕ್ಟರರಿಗೆ ಮರೆಹೋಗುವುದುಂಟು. ಆದರೆ ಇದಕ್ಕೆ ನೈಸರ್ಗಿಕವಾದ ರಾಮಬಾಣ ಉಪಚಾರವೆಂದರೆ ಸಂಭೋಗ. ಆದರೆ ಅದನ್ನು ಹೇಳುವ ಧೈರ್ಯವಿಲ್ಲದ ಡಾಕ್ಟರರು ಬೇರೆ ಉಪಚಾರಗಳನ್ನು ನಡೆಸುವರು; ಅವುಗಳಿಂದ ತರುಣರಿಗೆ ಲಾಭಕ್ಕಿಂತ ಹಾನಿಯೇ ಹೆಚ್ಚಾಗುವದು.

ಸಂಭೋಗವು ಅನೀತಿಯೆಂದೂ ಬ್ರಹ್ಮಚರ್ಯವೇ ಪರಮ ಧರ್ಮವೆಂದೂ ತಿಳಿದವ್ರರ ದುಷ್ಪರಿಣಾಮಗಳಿಗೆ ಮಿತಸಂಭೋಗವೇ ನಿಜವಾದ ಮದ್ದು. ಮನಸ್ತಾಪಕರವಾದ ಸಂಗತಿಗಳಿಂದ ದೂರಿರುವದು, ಬಯಲು ಗಾಳಿಯಲ್ಲಿ ವ್ಯಾಯಾಮ ಮಾಡುವದು, ಮನೋರಂಜನೆ, ಪ್ರಕೃತಿಧರ್ಮದ ಪ್ರವೃತ್ತಿಗಳ (ನಾವೀಗ ಪಾಶವೀಯವೆಂದು ತಪ್ಪು ತಿಳಿವಳಿಕೆ ಮಾಡಿಕೊಂಡಿರುವ ಪ್ರವೃತ್ತಿಗಳ) ಬೇಡಿಕೆಗಳನ್ನು ಪೂರಯಿಸುವ ಮಿಕ್ಕ ಸಾಧನಗಳನ್ನು ಕೈಕೊಳ್ಳುವದು ಈ ರೋಗ ನಿವಾರಣೆಗೆ ನೈಸರ್ಗಿಕ ಉಪಚಾರಗಳಾಗಿವೆ. ಬೇನೆಯು ಅಷ್ಟು ಪ್ರಬಲವಾಗಿರದಿದ್ದರೆ, ಅನೈಸ

ರ್ಗಿಕ ಉಪಚಾರಗಳಿಂದ ಪ್ರಕೃತಿಯು ಕೆಟ್ಟಿರದಿದ್ದರೆ, ಸಾಮಾನ್ಯವಾಗಿ ಮೇಲಿನ ಉಪಾಯಗಳಿಂದ ಆರೋಗ್ಯವೂ ಸೌಖ್ಯವೂ ಬೇಗನೆ ಮರಳಿ ದೊರೆಯುವವು. ತಾರುಣ್ಯದ ಕುರುಹುಗಳಾದ ಶಾರೀರಿಕ ಉತ್ಸಾಹವೂ ಆತ್ಮವಿಶ್ವಾಸವೂ ಪೌರುಷವೂ ಮತ್ತೆ ಲಭಿಸುವವು.

ಒಳ್ಳೇ ಕಠೋರವಾದ ಬ್ರಹ್ಮಚರ್ಯವನ್ನಾಚರಿಸುವವರೂ ಆರೋಗ್ಯ ಸಂಪನ್ನರೂ ಶಕ್ತಿಸಂಪನ್ನರೂ ಆಗಿರುವರೆಂದು ಕೆಲವರ ಅಭಿಪ್ರಾಯ. ಪ್ರಕೃತಿಯಿಂದ ಸುದೃಢವಾದವರು, ವಿಕಾರದ ಜೋರು ಕಡಿಮೆಯಿದ್ದವರು ಮೊದಲಾದ ಕೆಲವರಲ್ಲಿ ಮಾತ್ರ ಇದು ಸಾಧ್ಯವಾಗಿರುವದು. ಆದರೆ ಶಾಸ್ತ್ರೀಯವಾಗಿ ಹೇಳುವದಾದರೆ, ಒಬ್ಬರಿಗೆ ಸಾಧ್ಯವಿದ್ದದ್ದು ಎಲ್ಲರಿಗೂ ಸಾಧ್ಯವಾಗಲಾರದು; ಒಬ್ಬರಿಗೆ ಹೊಂದಿಕೆಯಾಗುವ ನಿಯಮವು ಎಲ್ಲರಿಗೂ ಹೊಂದಿಕೆಯಾಗಲಾರದು. ನೈಷ್ಠಿಕ ಬ್ರಹ್ಮಚರ್ಯವು ಪ್ರತಿಯೊಬ್ಬನಿಗೂ ಹೆಚ್ಚಾಗಿ ಹರಯ ಬಂದಾಗಿನಿಂದ ಕೆಲಕಾಲ ಬಹಳ ಘಾತಕವಾದದ್ದು. ಏಕೆಂದರೆ ಜೀವನವು ನಾವೀನ್ಯವನ್ನು ಪಡೆಯುತ್ತಿರುವದರಿಂದ ಕಾಮ ವಿಷಯಕ ಕಲ್ಪನಾತರಂಗಗಳು ಆಗ ಬಹು ತೀವ್ರವಾಗಿರುವವು, ಪ್ರಬಲವಾಗಿರುವವು, ಆಕರ್ಷಕವಾಗಿರುವವು. ಹೆಚ್ಚೇಕೆ, ಆಯುಷ್ಯದ ಚರಿತ್ರೆಯ ಆಭಾಗವನ್ನು ಕಾಮುಕಪ್ರಕರಣವೆಂದು ಹೆಸರಿಡಬಹುದು. ಮುಂದಿನ ಆಯುಷ್ಯಭಾಗದಲ್ಲಿ ದೇಹವು ಸಾಕಷ್ಟು ದಾರ್ಢ್ಯವನ್ನು ಹೊಂದಿರುವದರಿಂದ, ಸರಿಯಾಗಿ ಕಾಮತೃಪ್ತಿಯನ್ನು ಹೊಂದಿದ ಮನಸು ಶಾಂತವೂ ಸ್ಥಿರವೂ ಆಗಿರುವದರಿಂದ ಕಠೋರ ಬ್ರಹ್ಮಚರ್ಯದಿಂದ ಅಷ್ಟು ನಷ್ಟವಾಗುವದಿಲ್ಲ. ಆದರೆ ಬ್ರಹ್ಮಚರ್ಯದಿಂದ ಒಂದಿಲ್ಲೊಂದು ಬಗೆಯ ಹಾನಿಯು ತಟ್ಟೇ ತೀರುವದು. ಒಳ್ಳೆಯ ಮನೋಬಲ ಸಂಪನ್ನರು ಕೂಡ ಕಾಮದಹನದಿಂದ ಏನಿಲ್ಲೆಂದರೂ ಉದಾಶೀನರು ವಿಮನಸ್ಕರು ಆಗಿಯೇ ಆಗುವರು.

ನೈಷ್ಠಿಕ ಬ್ರಹ್ಮಚರ್ಯವನ್ನು ಪಾಲಿಸುವವರ ಶಾರೀರಿಕ ನೈತಿಕ ಸ್ವಭಾವವು ಮಿತಸಂಭೋಗದಿಂದ ತೃಪ್ತರಾಗಿದ್ದವರಷ್ಟು ಉಚ್ಚ ಯೋಗ್ಯತೆಯದಾಗಲಾರದು. ಈ ಸ್ವಾಭಾವಿಕವಾದ ಸತ್ಯ ತತ್ವವನ್ನು ಅರಿಯಲಾಗದಂತೆ ನಮ್ಮ ಬುದ್ಧಿಯನ್ನು ಹಳೆಯ ನೈತಿಕ ಸಂಸ್ಕಾರಗಳು ಮುಸುಕಿ

ಬಿಟ್ಟಿವೆ. ಎಲ್ಲ ತರುಣಿಯರಿಗೂ ಸುಲಭಸಾಧ್ಯವಲ್ಲದ ವಿವಾಹಬದ್ಧ ದಾಂಪತ್ಯ ಸುಖದ ಹೊರತು, ಉಳಿದೆಲ್ಲ ಸಂಭೋಗ ಸುಖವು ಹೇಯವಾದದ್ದೆಂದು ತಿಳುವಳಿಕೆಯಾಗಿರುವದು. ಇಂಥ ಸುಖವನ್ನು ಹೊಂದುವವರು, ಬಯಸುವವರು ಕೂಡ, ಅಧೋಗತಿಯನ್ನೈದುವರು, ಕೆಟ್ಟ ಕೆಟ್ಟ ಬೇನೆಗಳಿಗೆ ಈಡಾಗುವರು ಎಂಬ ಭಾವನೆಯು ಜನರಲ್ಲಿ ಮನೆಮಾಡಿರುವದು. ಇದರಿಂದ ತರುಣರು ಒಂದು ತೆರದ ಇಕ್ಕಟ್ಟಿನಲ್ಲಿ ಸಿಕ್ಕುಬೀಳುವರು. ನೀತಿಧರ್ಮವನ್ನನುಸರಿಸಿ ಪ್ರಕೃತಿದೇವಿಯ ಸಿಟ್ಟಿಗೆ ಗುರಿಯಾಗಿ ಆಸುಖವನ್ನು ಅನುಭವಿಸಬೇಕೋ? ಪ್ರಕೃತಿ ಧರ್ಮವನ್ನು ಅನುಸರಿಸಿ ನೀತಿಶಾಸ್ತ್ರಿಗಳ ವಿಡಂಬನೆಗೆ ಗುರಿಯಾಗಬೇಕೋ? ಪ್ರತಿಯೊಂದು ಅಂಗಾಂಗವನ್ನು ಅದರದರ ಗುಣಧರ್ಮಗಳಿಗನುಗುಣವಾದ ಕರ್ಮಗಳಿಗೆ ಉಪಯೋಗಿಸಿಕೊಳ್ಳುವದರಿಂದಲೇ ಆರೋಗ್ಯವು, ಸುಖವು, ಉತ್ಸಾಹವು ಲಭಿಸುವದೆಂದು ಪ್ರಕೃತಿಧರ್ಮವು ವಿಧಿಸುವದು. ಅದಕ್ಕೆ ವ್ಯತಿರಿಕ್ತವಾಗಿ ಆಚರಿಸಿದರೆ ಪ್ರಕೃತಿಯು ಶಿಕ್ಷಿಸುವದು. ಲೈಂಗಿಕ ಪ್ರಕೃತಿ ಧರ್ಮದ ಸಲುವಾಗಿ-ಅದರ ಕಟ್ಟಳೆಗಳನ್ನು ಮೀರಲಿಕ್ಕಾಗದ- ಪ್ರಕಟವಾಗಿ ನೀತಿಧರ್ಮವನ್ನು ಧಿಕ್ಕರಿಸಲು ಧೈರ್ಯವಿಲ್ಲದೆ ಸಂದಿಗ್ಧಾವಸ್ಥೆಯಲ್ಲಿರುವ ತರುಣರು ಕದ್ದುಮುಚ್ಚಿ ಸಂಭೋಗ ಸುಖವನ್ನು ಅನುಭವಿಸಲು ಸಾಹಸಪಟ್ಟು ಬೇನೆಗಳಿಗೆ ತುತ್ತಾಗುವರು. ನಿಜವಾಗಿಯೂ ಇಂಥ ಸೌಖ್ಯವು ಹೇಯವಾದದ್ದು. ಏಕೆಂದರೆ ಇದರಲ್ಲಿ ನಿಜವಾದ ಪ್ರೇಮವಿಲ್ಲ, ಆದರ ಗೌರವಗಳಿಲ್ಲ, ನ್ಯಾಯವಾದದ್ದೆಂಬ ಭಾವನೆಯಿಲ್ಲ, ಇದಕ್ಕೆ ವಿರುದ್ಧವಾಗಿ ಪಾಪದ ಭಾವನೆ ಅಧೋಗತಿಯ ಭೀತಿ ಇರುತ್ತದೆ.

ಮಾನವ ಜಾತಿಯ ಹಿತವನ್ನು ಬಯಸುವ ಪ್ರತಿಯೊಬ್ಬನ-ವಿಶೇಷವಾಗಿ ಪ್ರತಿಯೊಬ್ಬ ತರುಣನ ಕರ್ತವ್ಯವೆಂದರೆ, ಜನತೆಯ ಲೈಂಗಿಕ ವಿಷಯದ ಅಜ್ಞಾನವನ್ನು ಹೋಗಲಾಡಿಸಿ ಅದರ ಗೌಪ್ಯವನ್ನು ಭಂಗಿಸುವದು; ಮತ್ತು ಆ ವಿಷಯವು ಅಶ್ಲೀಲವೆಂಬ ಭಾವನೆಯನ್ನು ತೆಗೆದು ಹಾಕುವದು. ಅವರು ತಮ್ಮ ಲೈಂಗಿಕ ತೃಪ್ತಿಯನ್ನು ಪಡೆಯುವ ಹಕ್ಕನ್ನು ಅತ್ಯಗತ್ಯವಾಗಿ ಪ್ರಸ್ಥಾಪಿಸಿಕೊಳ್ಳಬೇಕು. ಈವರೆಗಿನ ಇದರ ದುರ್ಲಕ್ಷ್ಯದಿಂದ ಎಷ್ಟೋ ತರುಣರು ನಷ್ಟಕ್ಕೀಡಾಗಿರುವರು, ಎಷ್ಟೋ ಮನೆತನ

ಗಳು ಹಾಳಾಗಿರುವವು ಇದರಲ್ಲಿಯ ಮೂಲ ತತ್ವವೆಂದರೆ ಪ್ರತಿಯೊಂದು ಅವಯವಕ್ಕೆ ಸ್ವಾಭಾವಿಕವಾದ ತಕ್ಕ ವ್ಯಾಯಾಮಕ್ಕೂ ಅವುಗಳ ಸ್ವಾಭಾವಿಕವಾದ ವಿಕಾರಗಳ ತೃಪ್ತಿಗೂ ಸಮಾಜದಲ್ಲಿ ಆದರಯುಕ್ತವಾದ ಆಸ್ಪದವು ದೊರೆಯಲೇಬೇಕು ಸಂಪೂರ್ಣ ವಿಕಾರವಶತೆಯು ಅತಿರೇಕವು ಘಾತಕವಿರುವಂತೆ ಬ್ರಹ್ಮಚರ್ಯದ ಅತಿರೇಕವೂ ಘಾತಕವಾದದ್ದು. ಕಾಮತೃಪ್ತಿಯನ್ನು ತಕ್ಕಮಟ್ಟಿಗೆ ಹೊಂದಿರುವವನು ತನ್ನ ಆಯುಷ್ಯವನ್ನು ಅಸ್ವಾಭಾವಿಕವಾಗಿಯೂ ಪಾಪಮಯವಾಗಿಯೂ ಕಳೆಯುತ್ತಿರುವನೆಂದು ಹೇಳಲಡ್ಡಿಯಿಲ್ಲ. ಈ ತೆರದ ಜೀವನಕ್ರಮದಿಂದ ತರುಣ ತರುಣಿಯರು ದುಃಖವನ್ನು ಅನುಭೋಗಿಸುತ್ತಿರುವರು, ವೇಶ್ಯಾವೃತ್ತಿಯಲ್ಲಿ ಕಂಡು ಬರುವಂತೆಯೇ ವಿಶೇಷವಾಗಿ ನಮ್ಮ ಹೆಣ್ಣುಮಕ್ಕಳ ಸ್ಥಿತಿಯಾಗಿರುವದನ್ನು ನೋಡಿದರೆ ಎದೆಯೊಡೆದು ನೀರಾಗುವದು.

ಅತಿರಕ್ತ ಕಾಮತೃಪ್ತಿಯಿಂದ ನಷ್ಟವಾಗುವದಾದರೂ ಬ್ರಹ್ಮಚರ್ಯಾತಿರೇಕದಿಂದಾಗಲಿ ಅಸ್ವಭಾವಿಕವಾದ ಸಂಭೋಗದ ತೃಪ್ತಿಯಿಂದಾಗಲಿ ಉಂಟಾಗುವ ನಷ್ಟಕ್ಕಿಂತ ಆ ನಷ್ಟವು ಬಹಳ ಕಡಿಮೆಯಾಗಿರುವದು. ಏಕೆಂದರೆ ಸಂಭೋಗದ ಅತಿರೇಕಕ್ಕೆ ಸ್ವಾಭಾವಿಕವಾದ ತಡೆಗಳಿರುವವು. ಸ್ವ ಸಂಭೋಗದಲ್ಲಿ ಅವಿರುವದಿಲ್ಲ. ಕಂಡು ಬಂದ ಅನೇಕ ಉದಾಹರಣೆಗಳಲ್ಲಿ ಕಾಮಾಸಕ್ತಿಗಿಂತಲೂ ಅಜ್ಞಾನ ಹಾಗೂ ಅದೂರದರ್ಶಿತ್ವದಿಂದ ಕಾಮಾತಿರೇಕವುಂಟಾಗಿರುತ್ತದೆ. ಬೌದ್ಧಿಕ ಅತಿ ಶ್ರಮದಿಂದ ಆಗುವಷ್ಟು ಮತ್ತೇತರಿಂದಲೂ ಕಾಮಶಕ್ತಿಯು ದುರ್ಬಲವಾಗುವದಿಲ್ಲ. ಸಂಭೋಗಾತಿರೇಕವು ಕಾಮವಿಷಯಕವಾದ ಅಜ್ಞಾನದಿಂದ, ಸ್ತ್ರೀಪುರುಷರು ಪರಸ್ಪರರನ್ನು ತಿಳಿದುಕೊಳ್ಳದಿರುವದರಿಂದ, ವಿಶೇಷವಾಗಿ ಹೆಂಗಸಿನ ನಾಚಿಕೆ ನಯ ಭಯಗಳಿಂದ ಆಗುತ್ತದೆ. ಹೆಂಗಸು ತನ್ನ ಸುಖ ದುಃಖವನ್ನಾಗಲಿ, ಕಾಮತೃಪ್ತಿಯ ವಿಷಯವನ್ನಾಗಲಿ, ಸುಖಾಸನವನ್ನು ಕುರಿತಾಗಲಿ ಮನಬಿಚ್ಚಿಮಾತನಾಡುತ್ತಿರುವದಿಲ್ಲ; ತಮಗೆ ತೃಪ್ತಿಯಾಗಿದ್ದರೂ ಕೂಡದಣಿವಾಗಿದ್ದರೂ ಕೂಡ ಎರಡನೆಯವರಿಗೆ ತೃಪ್ತಿಯಾಗಿಲ್ಲವೆಂಬ ಭಾವನೆಯಿಂದ ಶಕ್ತಿಮೀರಿ ಸಂಭೋಗಕ್ಕೆ ಅವಕಾಶ ಕೊಡುತ್ತಿರುವಳು. ಇದರಿಂದ ಅವರಿಗೆ ಬಹಳ ಕೆಡಕುಂಟಾಗುತ್ತಿದೆ.

ತರುಣ ತರುಣಿಯರನ್ನು ಹಿಂಡಿ ಹಿಪ್ಪಿಮಾಡುವಂಥ ಮುಷ್ಟಿಮೈಥು ನಾದಿ ದುಶ್ಚಟಗಳಿಗೂ ಕಾಮರೋಗಗಳಿಗೂ (Veneral diseases) ಸಂಭೋಗದ ಬಗೆಗಿದ್ದ ನಿಷ್ಠುರವಾದ ನೈತಿಕ ಬಂಧನಗಳೇ ಕಾರಣವಾಗಿ ರುವವು. ಆ ಬಂಧನಗಳನ್ನು ಸಿಥಿಲಗೊಳಿಸಿ ಸ್ವಾಭಾವಿಕವಾದ ಸಂಭೋ ಗದ ದಾರಿಯನ್ನು ತೆರೆದಿಟ್ಟವಿನಾ ಮಾನವಜಾತಿಯ ಕಲ್ಯಾಣವಾಗುವದು ಶಕ್ಯವಿಲ್ಲ. ಗುಹ್ಯೇಂದ್ರಿಯಗಳ ಬೇನೆಗಳು ಅಕ್ಷಮ್ಯವಾದ ನೈತಿಕ ಬಂಧನ ಗಳನ್ನು ಮುರಿದ ಪಾಪದ ಫಲಗಳೆಂಬ ಭಾವನೆಯು—ಎಲ್ಲ ತಪ್ಪುಗಳೂ ನೈತಿಕ ಬಂಧನಗಳನ್ನು ಮುರಿಯುವದರಿಂದಲೇ ಉಂಟಾಗುತ್ತವೆಂಬದನ್ನು ಮರೆತು, ಮಿಕ್ಕ ಇಂದ್ರಿಯಗಳ ಉಪಯೋಗ (ದುರುಪಯೋಗ) ನೈತಿಕ ಅಪರಾಧವಲ್ಲ ಜನನೇಂದ್ರಿಯಗಳ ಉಪಯೋಗವಷ್ಟೆ ನೀತಿಗೆ ಸಂಬಂಧ ಪಟ್ಟವುಗಳೆಂದು ಅಜ್ಞಾನದ ಮೂಲಕ ಭಾವಿಸುತ್ತಿರುವದರಿಂದ— ಜನರಲ್ಲಿ ಅಜ್ಞಾನದ ಮೂಲಕ—ರೂಢವಾಗಿದ್ದರಿಂದ ಮೊದಲೇ ಬೇನೆಗಳಿಂದ ಬಳ ಲುತ್ತಿರುವವರನ್ನು ಹೇಯದೃಷ್ಟಿಯಿಂದ ನೋಡುವದರಿಂದ ಅವರಸ್ಥಿತಿಯು ಅತ್ಯಂತ ಶೋಚನೀಯ ವಾಗಿರುವದು. ಕಾಮವಿಷಯಕವಾಗಿಯೂ ಅವು ಗಳ ರೋಗ ವಿಷಯಕವಾಗಿಯೂ ಒಂದು ಬಗೆಯ ದಾಂಭಿಕತನವು, ರಹ ಸ್ಯವೂ, ಪಸರಿಸಿರುವದು. ಈ ದಾಂಭಿಕತನಕ್ಕೆ ಒಳಗಾಗದವರು ಸಾವಿರ ಕ್ಕೊಬ್ಬರಾದರೂ ಸಿಕ್ಕುವದು ದುರ್ಲಭ. ನೀತಿ ಶಾಸ್ತ್ರದ ಹೆದರಿಕೆಯಿಂದ; ಮಿದುಳು ಜಠರಾಶಯ ಮೊದಲಾದ ಅಂಗಗಳ ಉಪಯೋಗವನ್ನು ಮಾಡಿ ಕೊಳ್ಳುವಂತೆ ಜನಾಂಗಗಳ ಉಪಯೋಗವನ್ನು ಮಾಡಿಕೊಳ್ಳದಿರುವವರು ಯಾರೂ ವೀರ್ಯಸ್ಖಲನದ ದುರ್ಬಲತೆಯ ನೋವಿನಿಂದ ಮುಕ್ತರಾಗ ಲಾರರು. ಸರ್ ಐಝಾಕ ನ್ಯೂಟನ್ನರು ಒಳ್ಳೆಯ ಕಠೋರವಾಗಿ ಬ್ರಹ್ಮ ಚರ್ಯವ್ರತಪಾಲನೆ ಮಾಡುತ್ತಿದ್ದರೆಂದು ಹೇಳುತ್ತಾರೆ. ಅದರಿಂದ ಅವರು ಒಳ್ಳೆಯ ಶಕ್ತಿಸಂಪನ್ನರೂ ಸುಖಿಗಳೂ ಆಗಿದ್ದರೇ ? ಸಾಯುವ ಮುಂದೆ ಅವರ ಅಂಡಕೋಶಗಳು ತೀರಾ ಬತ್ತಿಹೋಗಿ ಅವರು ಎಂಥ ಪಾಪಕೃ ತ್ಯಮಾಡುತ್ತಿದ್ದರೆಂಬುದಕ್ಕೆ ಸಾಕ್ಷ್ಯಹೇಳುತ್ತಿದ್ದವು, ಪ್ರೌಢ ವಯಸ್ಸಿನ ತರುವಾಯ ಅವರ ಅಪ್ರತಿಮ ಬುದ್ಧಿಶಕ್ತಿಯು ಕುಗ್ಗುತ್ತ ಹೋಯಿತು.

ಇಳಿವಯಸ್ಸಿನಲ್ಲಿ ಅವರ ಮಾನಸಿಕ ಶಕ್ತಿಯು ನಷ್ಟವಾಗಿ ಬಿಟ್ಟಿತು. ನೈತಿಕ ಧಾರ್ಮಿಕ, ರಾಜಕೀಯ ವಿಷಯಗಳನ್ನು ಪ್ರಚಾರ ಮಾಡುವಂತೆ ಕಾಮ ಶಾಸ್ತ್ರದ ಜ್ಞಾನವನ್ನು ಪ್ರಚಾರಗೊಳಿಸುವದಕ್ಕೆ ಆತಂಕವಿರುವದರಿಂದ ಇಂಥ ಅನರ್ಥಗಳಾಗುವವು. ಕಾಲ್ಪನಿಕ ಸ್ವರ್ಗದ ಆಶೆಯಿಂದ ಪೊಳ್ಳು ಪಾವಿತ್ರ್ಯದ ಕಲ್ಪನೆಗಳಿಗೆ ಕಟ್ಟುಬೀಳುವ ಜನತೆಯನ್ನು ಅದರಿಂದ ಬಿಡುಗಡೆ ಮಾಡಬೇಕು ಜನನೇಂದ್ರಿಯಗಳ ಬೇನೆಗಳ ವಿಷಯವನ್ನು ಕೇವಲ ಡಾಕ್ಟರರಿಗೆ ಒಪ್ಪಿಸಿ, ಜನತೆಗೆ ಅವುಗಳ ದುಷ್ಪರಿಣಾಮಗಳ ಅರಿವು ಕೂಡ ಇಲ್ಲದಿರುವದು ಅತ್ಯಂತ ಹಾನಿಕಾರಕವು. ಈ ಪರಿಸ್ಥಿತಿ ಯನ್ನು ಹೋಗಲಾಡಿಸಿ ನಮ್ಮ ನೈತಿಕ ಕಟ್ಟಳೆಗಳಲ್ಲಿ ಅಗತ್ಯವಾದ ಬದ ಲಾವಣೆಗಳಾಗದೆ ಮಾನವ ಜಾತಿಯು ಸುಖದ ಮಾರ್ಗದಲ್ಲಿ ಮುಂದಡಿ ಯಿಡಲಾರದು.

ಈ ವಿಷಯದಲ್ಲಿ ಡಾಕ್ಟರರೂ ತಜ್ಞರೂ ಮಾತ್ರ ವಿಚಾರಮಾಡಿ ತಕ್ಕ ಉಪಾಯಗಳನ್ನು ಹುಡುಕಿಕೊಳ್ಳಲಿ ಎಂದು ಜನತೆಯು ತಿಳಿಯುವದು ತಪ್ಪು. ತಮ್ಮ ಸುಖಜೀವಿತಕ್ಕೆ ಅಗತ್ಯವಿದ್ದಷ್ಟು ಆರೋಗ್ಯ-ಅನಾರೋಗ್ಯ ಗಳ ಜ್ಞಾನವು ಪ್ರತಿಯೊಬ್ಬರಿಗೂ ಇರಬೇಕು. ಡಾಕ್ಟರರು ತಾವು ಶಾರೀ ರಿಕ ಚಿಕಿತ್ಸೆಯನ್ನು ಮಾತ್ರ ಮಾಡುವವರು, ನೈತಿಕ, ಧಾರ್ಮಿಕ, ಮಾನ ಸಿಕ ವಿಷಯಗಳ ಗೊಡವೆ ತಮಗೇಕೆ, ಕವಿಗಳು, ಸಾಹಿತಿಗಳು, ಧರ್ಮ ಗುರುಗಳು ಅವನ್ನು ನೋಡಿಕೊಳ್ಳಲಿ ಎಂಬದೂ ತಪ್ಪು. ಏಕೆಂದರೆ ಶರೀ ರದ ಯಾವದೇ ಅಂಗವಾಗಲಿ ನೈತಿಕ ಕಲ್ಪನೆಗಳ ಅಥವಾ ಮಾನಸಿಕ ವಿಕಾರಗಳ ಪರಿಣಾಮಗಳಿಗೆ ಒಳಗಾಗದೆ ಇರಲಾರದು. ಈ ಕವಿಗಳು, ಸಾಹಿತಿಗಳು, ಧಾರ್ಮಿಕರು ಈ ಮಾದರಿಯ ಅಜ್ಞಾನದಿಂದಲೇ ಶರೀರಕ್ಕೆ ವಿಘಾತಕವಾದಂಥ ನೈತಿಕ ಧಾರ್ಮಿಕ ತತ್ವಗಳನ್ನು ಉಪದೇಶಿಸಿ, ಸಾಮಾ ನ್ಯಜನತೆಯನ್ನು ಪರಲೋಕದ ಮಬ್ಬಿನಲ್ಲಿ ಕೆಡಹಿ, ದುಃಖವನ್ನು ಹೋಗ ಲಾಡಿಸುವ ನೆವದಿಂದ ದುಃಖವನ್ನು ಹೆಚ್ಚಿಸುತ್ತಿರುವರು ; ಸಮಾಜದ ಸ್ವಾಸ್ಥ್ಯವನ್ನು ಕೆಡಿಸಿ ಜಗತ್ತಿನಲ್ಲಿ ವಿಷಮತೆಯನ್ನು ಪಸರಿಸಿ; ದೇವರ ಅಗತ್ಯವನ್ನೂ ಅಸ್ತಿತ್ವವನ್ನೂ ಪ್ರಸ್ಥಾಪಿಸುತ್ತಿರುವರು.

ಬಹಿರಂಗ ಪರಿಸ್ಥಿತಿಯು ಅನುಕೂಲವಿಲ್ಲದ್ದರಿಂದ ಲಗ್ನವಾಗದೆ- ನಿರಾತಂಕವಾದ ನಿರಪವಾದವಾದ ಸಂಭೋಗ ಸುಖವನ್ನು ಅನುಭವಿಸ ಲಾರದೆ-- ಇರುವವರು, ಆದರೆ ದೇಹದಾರ್ಢ್ಯದ ಮೂಲಕ ಮತ್ತು ಆರೋ ಗ್ಯದ ಮೂಲಕ ಕಾಮವಿಕಾರವು ಪ್ರಬಲವಾಗಿರುವವರು ಅದನ್ನು ತೃಪ್ತಿ ಗೊಳಿಸಲು ಸಮರ್ಥರಾಗದೆ ದೈಹಿಕ ಅಪಾಯಕ್ಕೆ ಗುರಿಯಾಗುವರು. ಅಥವಾ ಗಂಡು ಹೆಣ್ಣಿನ ಸ್ವಾರ್ಥದ ಮೂಲಕ ಮೋಹ ಹೋಗಿ ಜನನೇಂ ದ್ರಿಯ ರೋಗಗಳಿಂದ ಪೀಡಿತರಾದವರ ಕೂಡ ಲಗ್ನವಾಗುವ ಪ್ರಸಂಗ ಬಂದಿರುವದು, ಇಲ್ಲವೆ ಪ್ರೇಮ ಅಥವಾ ಮಿಕ್ಕ ವಿಕಾರಗಳ ಮೂಲಕ ಅಂಥವರ ಕೂಡ ಸಂಭೋಗ ಪಡೆಯುವ ಪ್ರಸಂಗ ಬಂದಿರುವದು. ಇಂಥ ವರು—ಗಂಡಸರು ಹೆಂಗಸರಿಬ್ಬರೂ—ತಮ್ಮ ಹಾಗೂ ಸಮಾಜದ ಹಿತ ಕ್ಕಾಗಿ ಕೆಲವೊಂದು ಉಪಾಯಗಳನ್ನು ಮಾಡಿದರೆ ಜನನೇಂದ್ರಿಯ ರೋಗ ಗಳು ತಟ್ಟುವ ಸಂಭವವು ಬಹುಮಟ್ಟಿಗೆ ಕಡಿಮೆಯಾಗುವದು. ತೊಂದ ರೆಯಿಲ್ಲದ ಹೆಚ್ಚು ತಗಲದ ಉಪಾಯಗಳು ಅವಾವುವೆಂದರೆ—ರತಿಕ್ರೀಡೆ ಮುಗಿದೊಡನೆ ಮೂತ್ರವಿಸರ್ಜನೆ ಮಾಡುವದು, ಜನನೇಂದ್ರಿಯಗಳನ್ನು ಸ್ವಚ್ಛವಾದ ನೀರಿನಿಂದಾಗಲಿ ಉಪ್ಪಿನ ನೀರಿನಿಂದಾಗಲಿ ( ಇವ್ನಾಮು ಸಾಲ್ವ ಒಳ್ಳೆಯದು ) ಸ್ವಚ್ಛವಾಗಿ ತೊಳೆಯುವದು ; ಮೂತ್ರವಿಸರ್ಜನೆ ಯಿಂದ ಜನನೇಂದ್ರಿಯದ ಒಳಭಾಗವು ಜಳಜಳವಾಗುವದು, ಸಂಭೋ ಗದ ಸಂಗಾತಿಯು ರೋಗಿಯೆಂಬ ಸಂಶಯ ಬಂದಲ್ಲಿ ರತಿಕ್ರೀಡೆಯನ್ನು ಹೆಚ್ಚು ಹೊತ್ತು ಬೆಳಿಸಬಾರದು, ಮತ್ತು ವೀರ್ಯವಿಸರ್ಜನೆಯನ್ನು ಮಾಡ ಬೇಕು- ವೀರ್ಯವು ಇಂದ್ರಿಯವನ್ನು ಸ್ವಚ್ಛೀಕರಿಸಲು ಸಹಕಾರಿಯಾಗಿ ರುವದು. ತಪ್ಪುದಾರಿ ಹಿಡಿದು ಅಂಟಿಸಿಕೊಂಡ ಜನನೇಂದ್ರಿಯ ವಿಷಯದ ರೋಗಗಳನ್ನು ನಿವಾರಿಸುವ ಅಥವಾ ಯಾವುದಾದರೊಂದು ಪ್ರತಿಬಂಧಕ ಉಪಾಯವನ್ನು ಹೇಳಿಕೊಡುವದು ತಪ್ಪೆಂದೂ, ದೇವರು ಆ ತಪ್ಪುಗಳಿ ಗಾಗಿ ಬೇನೆ ರೂಪವಾಗಿ ಪ್ರಾಯಶ್ಚಿತ್ತವನ್ನು ಮಾಡುತ್ತಿರುವಾಗ ಅದನ್ನು ನಿವಾರಿಸುವ ಮಾರ್ಗ ಹೇಳಿಕೊಡುವದೆಂದರ ಅನೀತಿಗೆ ಪ್ರೋತ್ಸಾಹನ ಕೊಟ್ಟಂತಾಗುವದೆಂದೂ ಕೆಲವರ ತತ್ವಜ್ಞಾನ. ಇದಕ್ಕೆ ಹುರುಳಿಲ್ಲದ ಹುಚ್ಚು ತತ್ವಜ್ಞಾನವೆನ್ನಬಹುದು. ಈ ಜನನೇಂದ್ರಿಯ ರೋಗಗಳು ಬಹಳ

ಘಾತುಕವಾದವುಗಳು. ಇದರಿಂದ ಎಷ್ಟೋ ಕುಟುಂಬಗಳು ಹಾಳಾಗಿವೆ. ನಿರುಪದ್ರವಿಗಳಾದ ಹೆಣ್ಣುಮಕ್ಕಳಿಗೂ, ಹುಟ್ಟುವ ಕೂಸುಗಳಿಗೂ ಇದರಿಂದ ವಿಪರೀತ ಹಾನಿಯುಂಟು. ಇದು ಭಯಂಕರವಾದ ಸಾಂಸರ್ಗಿಕವಾದ ರೋಗವು. ಅಯ್ಯೋ ಅಜ್ಞಾನವೇ! ನೀತಿಯೆಂಬ ತೆರೆಯಲ್ಲಿ ಈ ವಿಷಯಗಳನ್ನು ಮರೆಯಾಗಿರಿಸಿ ಜೀವಿತದ ಸಾರವೇ ಹಾಳಾಗಿ ಬಿಟ್ಟಿದೆ. ಇಂಥ ತಿಳಿಗೇಡಿತನ ಹಾಗು ಗುಪಿತಗಳಿಂದ ಮಾನವನು ವ್ಯರ್ಥವಾಗಿ ದುಃಖಿಯಾಗಿದ್ದಾನೆ ಅಜ್ಞಾನ ಮತ್ತು ನಿಷ್ಠುರತೆಯಿಂದ ಆವರಿಸಿದ ಈ ಮುಸುಕು ನಮ್ಮ ಆರೋಗ್ಯವನ್ನೇ ಕೆಡಿಸಿಬಿಡುವದು. ಯಾವ ವಿಷಯಕ್ಕಾದರೂ ಮನುಷ್ಯನಿಗೆ ಜ್ಞಾನವು ಬೇಕೇ ಬೇಕು. "ಜ್ಞಾನವಿಲ್ಲದವನು ಶ್ವಾನನಿಗಿಂತಲೂ" ಕಡೆ ಯೆನ್ನುವದು ಸುಳ್ಳಲ್ಲ. ಅಜ್ಞಾನ ಮತ್ತು ಗುಪಿತಗಳಿಂದೂ ನ್ಯಾಯಸಮ್ಮತವಾದವುಗಳಲ್ಲ. ಈ ಗುಪಿತ ಮತ್ತು ಅಜ್ಞಾನಕ್ಕೆ ಅಧ್ಯಾತ್ಮವು ಕಾರಣವಾದಂತೆ ನಿಸರ್ಗವೂ ಕಾರಣವಾಗಿದೆಯೋ ? ಎಂದಿಗೂ ಇಲ್ಲ! ಆದುದರಿಂದ ಪ್ರತಿಯೊಬ್ಬ ಸ್ತ್ರೀ ಪುರುಷರು ದೇಹದ ಮತ್ತು ಅದರ ಎಲ್ಲ ಪ್ರಕೃತಿ ಧರ್ಮಗಳ ಅಭ್ಯಾಸವನ್ನು ನಿರಾತಂಕವಾಗಿ ಮಾಡಲೇಬೇಕು. ಹೇಯಭಾವದಿಂದ ಅತ್ತಕಡೆಗೆ ಗಮನ ಕೊಡದಿರುವದು ಕೆಡುಕಾದದ್ದು ಮಾನವನು ಅದರಿಂದಲೇ ಹೀನಾವಸ್ಥೆಗಿಳಿದಿದ್ದಾನೆ. ಪ್ರಕೃತಿ ಧರ್ಮವನ್ನು ಅಭ್ಯಾಸಮಾಡಿ ಅದಕ್ಕನುಸರಿಸಿ ನಡೆಯುವ ಸ್ತ್ರೀ ಪುರುಷರೇ ನಿಜವಾದ ನೀತಿವಂತರು.

ನಾವು ಒಂದು ವೇಳೆ ಬೇನೆಗಳ ವಿಷಯವಾಗಿ ವಿಚಾರ ಮಾಡುವದೇ ಬೇಡವೆಂದು ಬಗೆದರೂ ನಿಸರ್ಗವು ಬೇನೆಗಳಿಂದ ಬಳಲುವ ದುಃಖಿಗಳ ಕೂಗನ್ನು ಕೇಳಗೊಡುವದಿಲ್ಲ! ಸದ್ಯದ ಲೈಂಗಿಕ ನೀತಿಶಾಸ್ತ್ರವು ಅಜ್ಞಾನದ ತಳಹದಿಯ ಮೇಲೆ ನಿಂತಿದ್ದು, ಸತ್ಯಕ್ಕೆ ಅಥವಾ ಪ್ರಕೃತಿ ಧರ್ಮಕ್ಕೆ ವಿರುದ್ಧವಾಗಿ ಇದೆ ಜನನೇಂದ್ರಿಯಗಳ ಯೋಗ್ಯ ಉಪಯೋಗ ಮಾಡಿಕೊಂಡು ಅವುಗಳ ವಿಕಾರಗಳ ಶಮನವನ್ನು ಮಾಡುವದು ಪ್ರತಿಯೊಬ್ಬ ಮಾನವನ ಕರ್ತವ್ಯವೇ ಆಗಿದೆ. ಇದು ಪ್ರಕೃತಿ ಧರ್ಮದ ಕಟ್ಟಪ್ಪಣೆ! ಸಮಾಜವು ರಚಿಸಿದ ಲಗ್ನ ವ್ಯವಸ್ಥೆಯು ಕಾರಣಾಂತರಗಳಿಂದ ಸಾಕಷ್ಟು ಸಮಾಧಾನಕರವಾಗಿಲ್ಲವಾದ್ದರಿಂದ ಈ ಕರ್ತವ್ಯವನ್ನು ಪಾಲಿಸುವದರಲ್ಲಿ

ಸಾಮಾಜಿಕ ಎಡರುಗಳು ಬಹಳ ಬರುತ್ತವೆ. 'ಪ್ರೀತಿಯೊಂದು ಇಂದ್ರಿಯದ ಯೋಗ್ಯ ಉಪಯೋಗವನ್ನು ಮಾಡಿಯೇ ತೀರಬೇಕೆಂದು' ಪ್ರಕೃತಿಯು ಕಟ್ಟಪ್ಪಣೆ ಮಾಡುವದಾದರೆ 'ನಿಮಗೆ ತಿಳಿಯಲಿ ತಿಳಿಯದೆ ಇರಲಿ ನಾವು ಮಾಡಿಟ್ಟ ಕಟ್ಟಳೆಯಂತೆಯೇ ನಡೆಯಬೇಕು. ನಾವು ಹೇಳುವದೇ ಪೂರ್ವ, ಅದೇ ಪಶ್ಚಿಮ' ಎಂದು ಸಮಾಜವು ಹೇಳುವದು. ಇಂಥ ವಿಷಮ ಪರಿಸ್ಥಿತಿಯನ್ನು ಎಲ್ಲರೂ ಚೆನ್ನಾಗಿ ತಿಳಿದುಕೊಂಡು ಸಮಾಜ ರಚನೆಯನ್ನು ಮಾರ್ಪಾಟುಮಾಡಿ ವಿವಾಹ ಸಂಸ್ಥೆಯಲ್ಲಿ ಎಲ್ಲರಿಗೂ ಅನುಕೂಲವಾಗುವಂಥ ಹೊಸ ವಿಧಾನಗಳನ್ನು ಕಲ್ಪಿಸಬೇಕು.

ಮಾನವನಿಗೆ ತನ್ನ ಅಂಗಾಗಗಳ ಬಗ್ಗೆ ನಿಜವಾದ ಜ್ಞಾನವುಂಟಾದ ಮೇಲೆ, ಸತ್ಯವಾದ ನೈತಿಕ ಶಾಸ್ತ್ರವು ನೆಲೆಗೊಂಡ ಮೇಲೆ ತನ್ನ ತಪ್ಪಿನಿಂದ ಹಿಂದೊದಗಿದ ಘೋರ ದುಃಖಗಳ ಅರಿವಾಗುತ್ತದೆ. ಸಮಾಜದಿಂದ ಹೊರದೂಡಿದ ಅಬಲೆಯರ ಮೇಲೆ, ಲೈಂಗಿಕ ರೋಗಿಗಳ ಮೇಲೆ ಆದ ಅನ್ಯಾಯಗಳ ಬಗ್ಗೆ ಪಶ್ಚಾತ್ತಾಪವಾಗುತ್ತದೆ. ಈ ಸಮಸ್ಯೆಯು ಜೀವಾಳದ ಮಹಾಸಮಸ್ಯೆಯಾಗಿದ್ದರೂ ಇದನ್ನು ಬೇಗನೆ ಬಿಡಿಸುವಷ್ಟು ಧೈರ್ಯವು ಮಾನವರಲ್ಲಿಲ್ಲ. ಆತ್ಮವಂಚನೆಯನ್ನು ಬಿಟ್ಟಾಗ ಈ ಸಮಸ್ಯೆ ಬಗೆಹರಿಯುವದು. ಇದು ಬಗೆಹರಿಯಬೇಕಾದರೆ ಇನ್ನೂ ಎಷ್ಟೋ ದಿನಗಳು ಬೇಕು. ಈ ಸಂಗತಿಯು ಅಕ್ಕ-ತಂಗಿಯರ ಕಿವಿಯವರೆಗೆ ಮುಟ್ಟಬೇಕಾದರೆ ಇನ್ನೂ ಹೆಚ್ಚು ದಿವಸಗಳು ಬೇಕು ಅವರನ್ನು ಈ ವಿಷಯವಾಗಿ ನಾವು ಬಹಳ ಅಂಧಃಕಾರದಲ್ಲಿಟ್ಟಿದ್ದೇವೆ. ಮನುಷ್ಯನು ನಿಜವಾಗಿ ಸುಖಿಯಾಗಬೇಕಾದರೆ ಸ್ತ್ರೀ-ಪುರುಷರಲ್ಲಿರುವ ಭೇದಭಾವಗಳನ್ನು ಬಿಟ್ಟುಕೊಟ್ಟು ದೇಹ ಹಾಗು ಆತ್ಮ ಇವೆರಡರ ಆದರ್ಶಭೂತವಾದ ವಿಕಾಸದ ಕಡೆಗೆ ಗಮನವೀಯಬೇಕು. ಅಂದರೇನೆ ಲೈಂಗಿಕ ಬೇನೆಗಳಿಂದ ಮುಕ್ತನಾಗಬಲ್ಲನು.



# ಹೆಂಗಸರ ಲೈಂಗಿಕ ಬೇನೆಗಳು !



ಈ ಬೇನೆಗಳಿಗೆ ಮುಖ್ಯವಾದ ಕಾರಣವೆಂದರೆ ಸ್ತ್ರೀಯರ ಜನನೇಂದ್ರಿಗಳ ಬಗ್ಗೆ ತಿಳಿದುಕೊಂಡಿರುವ ತಪ್ಪುಕಲ್ಪನೆ. ಆ ಬಗ್ಗೆ ಮಾತಾಡುವದು ನಾಚಿಕೆ, ನೋಡುವದು ಕೀಳು, ಎಂಬ ಸಂಕುಚಿತ ದೃಷ್ಟಿಯನ್ನು ಇಟ್ಟುಕೊಂಡುದರಿಂದಲೇ ಅನೇಕಾನೇಕ ಅನರ್ಥಗಳನ್ನು ಬರಮಾಡಿ ಕೊಂಡಿದ್ದೇವೆ. ಉಳಿದ ಇಂದ್ರಿಯಗಳ ಬಗ್ಗೆ ಜ್ಞಾನವಿರುವಂತೆ ಜನನೇಂದ್ರಿಯದ ಬಗ್ಗೆ ಯಾವ ಜ್ಞಾನವೂ ಇಲ್ಲ. ಅದನ್ನು ತಿಳಿದುಕೊಳ್ಳುವದು ಅಶ್ಲೀಲವೆಂದು ಕೆಲವರು ಹೇಳುವದೂ ಉಂಟು. ಹೀಗಿರುವದರಿಂದ ಜನನೇಂದ್ರಿಯಕ್ಕೆ ಸಂಬಂಧಪಟ್ಟ ರೋಗವೇನಾದರೂ ಇದ್ದರೆ ಹೇಳ ಹೆಸರಿಲ್ಲದೆ ಹೋಗುವದೇ ಸೈ! ಈ ಅಜ್ಞಾನದ ಮೂಲಕವೇ ಸಾವಿರಾರು ಅಕ್ಕ-ತಂಗಿಯರು ಪ್ರದರ, ಹೊಟ್ಟೆಸೂಲೆ, ಆರ್ತವನಷ್ಟತೆ, ಅತ್ಯಾರ್ತವ ಮುಂತಾದ ಜನನೇಂದ್ರಿಯಗಳ ರೋಗ, ಮೂಲವ್ಯಾಧಿ ಮುಂತಾದ ಕೆಟ್ಟ ರೋಗ, ಇವುಗಳ ವಿಷಯವಾಗಿ ತೀರ ಮೈಮೇಲೆ ಪ್ರಸಂಗ ಬರುವವರೆಗೂ ವೈದ್ಯರ ಮುಂದಾಗಲೀ, ಡಾಕ್ಟರರ ಮುಂದಾಗಲೀ ಹೇಳಲು ನಾಚುವದರಿಂದ ತಮ್ಮ ದೇಹವನ್ನೇ ಕಾಲನಿಗೆ ಬಲಿಕೊಡುವ ಪ್ರಸಂಗಕ್ಕೆ ಗುರಿಯಾಗುತ್ತಾರೆ. ಕುಮಾರಿಕೆಯರು, ಅಥವಾ ವಿಧವೆಯರಿದ್ದರಂತೂ ತೀರಿ ಹೋಯಿತು; ಸಾಧ್ಯವಿದ್ದಷ್ಟು ಈ ರೋಗಗಳನ್ನು ಹತ್ತಿಕ್ಕಿ ಇಡುವರು. ನಾಚಿಕೆಯಿಂದ ಸಾಯುವರು. ಈ ಮುಚ್ಚುಮರೆ, ಈ ಗುಪಿತ, ಎಂದಿಗೆ ಇಲ್ಲದಂತಾಗುವದೋ ಅಂದಿನವರೆಗೆ ಮಾನನನಿಗೆ ಸುಖವಿಲ್ಲ. ಮಿಕ್ಕ ಅನೇಕ ವಿಷಯಗಳಂತೆ ಈ ವಿಷಯದಲ್ಲಾದರೂ ಹಿತೋಕ್ತಿಗಳನ್ನು ಸಾರ್ವಜನಿಕವಾಗಿ ಚರ್ಚಿಸಲು ಆತಂಕವಿರುವವರೆಗೆ ಈ ರೋಗಗಳು

ಹೀಗೆಯೇ ಇರತಕ್ಕವೇ. ತಮ್ಮ ಆರೋಗ್ಯ-ಅನಾರೋಗ್ಯಗಳ ಅರಿವು ಎಲ್ಲ ಸ್ತ್ರೀಯರಿಗೂ ಇರಲೇಬೇಕು. ಈ ಜ್ಞಾನಪ್ರಾಪ್ತವಾದಾಗಲೇ ಬೇನೆಗಳು ನಿರ್ನಾಮವಾಗುವವು.

ಡಾಕ್ಟರರ ಹೊರ್ತು ಮಿಕ್ಕೆಲ್ಲರೂ ಲೈಂಗಿಕ ವಿಷಯವಾಗಿ ಅಜ್ಞಾನಿಗಳಾಗಿದ್ದಾರೆ. ಜನನೇಂದ್ರಿಯಗಳ ರಚನೆ, ಧರ್ಮ, ಮತ್ತು ಬೇನೆಗಳನ್ನು ಕುರಿತು ವಿಚಾರ ಮಾಡುವದೇ ಪಾಪವೆಂದು ಸಾಮಾನ್ಯ ಜನತೆಯ ಕಲ್ಪನೆ. ನೀತಿವಂತರು ಈ ವಿಷಯವಾಗಿ ಏನೇನಾದರೂ ತಪ್ಪು ಪ್ರಚಾರ ಸಹ ಮಾಡುವರು. ಸ್ತ್ರೀಯರೆಂದರೆ ಕೀಳೆಂದು ಅವರು ಹೇಳುವರು. ಪಾಪ ಮಾಡಿದರೆ ಹೆಣ್ಣಿನ ಜನ್ಮ ಬರುವದು ಇತ್ಯಾದಿಯಾಗಿ ನುಡಿಯುವರು. ಪುರುಷನು ಯಾವ ತಪ್ಪನ್ನು ಮಾಡಿದರೂ ಪಾರಾಗಬಹುದು. ಆದರೆ ಸ್ತ್ರೀಯು ಜನ್ಮ ಜನ್ಮಾಂತರಕ್ಕೂ ಅದರ ಫಲವನ್ನು ಭೋಗಿಸಲೇಬೇಕು. ಸಂಭೋಗಿಸಿದ ಸ್ತ್ರೀಯನ್ನು ಭ್ರಷ್ಟಳನ್ನಾಗಿ ತಿಳಿಯುತ್ತಿದ್ದು ಅವಳೊಡನೆ ಉಪಭೋಗಿಸುವದೆಂದರೆ ಉಚ್ಛಿಷ್ಟ ಭಕ್ಷಣವೇ ಎಂದು ತಿಳಿಯುವದುಂಟು. ಅಂಥವಳೊಡನೆ ಲಗ್ನವಾಗುವದೇ ಸಾಧ್ಯವಿಲ್ಲ ಪುರುಷನು ಕದ್ದು ಸಾವಿರಾರು ವೇಶ್ಯೆಯರೊಡನೆ ಸಹವಾಸ ಬೆಳೆಸಲಿ, ಬೇರೆಯವರ ಹೆಂಡರೊಡನೆ ಚೆಲ್ಲಾಟವಾಡಲಿ ಆದರೆ ತಾನು ಲಗ್ನವಾಗುವ ಕನ್ಯೆ ಮಾತ್ರ ಶುಚಿರ್ಭೂತಳಿರಬೇಕು. ಇವುಗಳಿಂದ ಸ್ತ್ರೀ-ಪುರುಷರ ನೀತಿ-ಧರ್ಮಗಳಲ್ಲಿರುವ ವಿಷಮತೆಯು ಸ್ಪಷ್ಟವಾಗಿ ವ್ಯಕ್ತವಾಗುತ್ತದೆ.

ಸಂಭೋಗದ ವಿಷಯದಲ್ಲಿ ಕೂಡ ಜನರಿಗೆ ಜ್ಞಾನವಿರುವದಿಲ್ಲ. ಅದೊಂದು ತುಡುಗಿನಿಂದ ರಾತ್ರಿಯಲ್ಲಿಯೇ ನಡಯುವ ವ್ಯವಹಾರವೆಂದು ಕೆಲವರು ತಿಳಿಯುವರು. ಮುಟ್ಟಾದ ಸ್ತ್ರೀಯ ಸ್ಪರ್ಶವಂತೂ ಮಹಾಪಾಪಕರವೆಂದೂ ಅವರ ಭಾವನೆ. ಸಂಬಂಧವಂತೂ ಪಂಚಮಹಾಪಾತಕಗಳಲ್ಲೊಂದು. ಮುಟ್ಟಾದ ಸ್ತ್ರೀಯು ಬೇನೆಯಿಂದಿದ್ದರಂತೂ ಆರೈಕೆ ಇಲ್ಲದೆ ಸಾಯುವದೇ ಸೈ! ಮುಟ್ಟಿಗೂ ಅವಳನ್ನು ಇಷ್ಟೊಂದು ಅಸ್ಪೃಶ್ಯಳಂತೆ ನಡೆಸುವದಕ್ಕೂ ಸಂಬಂಧವೇನೋ ದೇವರೇ ಬಲ್ಲ. ನಿಜವಾದ ಶಾಸ್ತ್ರೀಯ ಜ್ಞಾನವಿಲ್ಲದ್ದರಿಂದಲೇ ಮಡಿ-ಮೈಲಿಗೆಯೆಂಬ ಕಾಲ್ಪನಿಕ

ಬಂಧನಗಳನ್ನು ಹಾಕಿಕೊಂಡು ಬಳಲುತ್ತಿರುವದು. ಸುಶಿಕ್ಷಿತ ಸ್ತ್ರೀಯರು ಮುಂದಾಗಿ ಬಂದು ನಿಜವಾದ ಶಾಸ್ತ್ರೀಯ ಜ್ಞಾನವನ್ನು ಮಾಡಿಕೊಂಡು ಅಜ್ಞಾನವನ್ನು ಹೋಗಲಾಡಿಸಿದ ಹೊರತು ಮಾನವ ಜಾತಿಗೆ ಸೌಖ್ಯವಿಲ್ಲ. ಹಿಂದಿನವರು ಮಾಡಿದ್ದೇ ಪ್ರಾಧಾನ್ಯವೆಂದು ಕಣ್ಣುಮುಚ್ಚಿಕೊಂಡು ಕೂಡ್ರುವದು ಎಷ್ಟುಮಾತ್ರಕ್ಕೂ ಒಳ್ಳೆಯದಲ್ಲ ಜನನೇಂದ್ರಿಯಗಳ ವಿಷಯಕ್ಕೆ ಇಷ್ಟೊಂದು ತಿರಸ್ಕಾರವನ್ನು ತಾಳುವದು ನಿಸರ್ಗ ನಿಯಮಕ್ಕೆ ವಿರುದ್ಧವಾದದ್ದು. ಕಾಮವಿಕಾರಗಳನ್ನು ಅಳಿಯಲಿಚ್ಛಿಸುವ ಮಠಾಧೀಶರೂ, ಸನ್ಯಾಸಿಗಳೂ ಈಗೀಗ ಇಲ್ಲದಾಗಿದ್ದರೂ ಅವರು ಸಾರಿಹೋದ ಮೊದಲಿನ ಪೊಳ್ಳು ಉಪದೇಶಗಳು ಮಾತ್ರ ಜನರಲ್ಲಿ ಇನ್ನೂ ಪ್ರಚಾರದಲ್ಲಿವೆ. ಗಂಡಸರು ಆ ಬಂಧನಗಳಿಂದ ನಿರ್ಲಿಪ್ತರಾಗಿದ್ದರೂ ಹೆಂಗಸರು ಆಗಿಲ್ಲ! ಆಗುವಂತಿಲ್ಲ ಪತಿವ್ರತಾ ಧರ್ಮವು (ಗಂಡನತ್ತ ಮೇಲೂ, ಅವನು ದೃಶ್ಯ ಅಥವಾ ಅದೃಶ್ಯನಿದ್ದಾಗಲೂ, ಪರಸ್ತ್ರೀಯರ ವ್ಯಾಮೋಹದಲ್ಲಿ ಬಿದ್ದು ದುರಾಚಾರಿಯಾಗಿ ತಿರುಗುತ್ತಿದ್ದಾಗಲೂ ಬೇರೆಯವರ ಕೂಡ ಸಂಬಂಧ ಮಾಡದೆ ಬ್ರಹ್ಮಚರ್ಯದಿಂದಿರುಪಿಕೆ) ಒಂದು ದೊಡ್ಡ ಸದ್ಗುಣವೆಂದೆಣಿಸಲ್ಪಡುತ್ತದೆ. ಈ ಧರ್ಮವನ್ನು ಐಚ್ಛಿಕವಾಗಿ ಪಾಲಿಸುವವರು ತೀರವಿರಳ. ಅನೈಚ್ಛಿಕವಾಗಿ ಪಾಲಿಸುವವರೇ ಬಹಳ. ಜೀವನದಲ್ಲಿ ಅವರಿಗೆ ನಿಜವಾದ ಸೌಖ್ಯವಿರುವದಿಲ್ಲ. ಆದರೆ ಆತ್ಮತ್ಯಾಗ, ಸಂಯಮಗಳ ಫಲವಾಗಿ ಪತಿವ್ರತೆಯೆಂಬ ಬಿರುದು ಮಾತ್ರ ಸಿಗುತ್ತದೆ. ನಿಸರ್ಗವು ತನ್ನ ನಿಯಮಕ್ಕನುಸರಿಸಿ ಅವರನ್ನು ಕಾಮನಾಟಕ್ಕೆ ಸೆಳೆಯುತ್ತಲೇ ಇರುತ್ತದೆ. ಆದ್ದರಿಂದ ಅಂಥ ಸ್ತ್ರೀಯರನ್ನು ನಾವು ತಿರಸ್ಕರಿಸುವದರಲ್ಲಿ ಅರ್ಥವಿಲ್ಲ. ಅದರಲ್ಲಿ ಅವರು ತಪ್ಪಿತರೆಂದೂ ತಿಳಿಯಲಾಗದು. ಇಂಥ ತಪ್ಪುಗಳು ನಮ್ಮ ಸಮಾಜದ ರಚನೆ, ವಿವಾಹ ಸಂಸ್ಥೆಗಳ ರಚನೆ ಇವುಗಳಲ್ಲಿಯೇ ಇವೆ. ವಿವಾಹಗಳಲ್ಲಿರುವ ಕಟ್ಟುಗಳು ಸಡಿಲಾಗಿ, ಪ್ರೀತಿ ವಿವಾಹಗಳಿಗೆ ಆಸ್ಪದವಿರುವದಾದರೆ ದುರ್ಧರ ಪ್ರಸಂಗಗಳೇ ಇಲ್ಲದಂತಾಗಿ ಎಲ್ಲರಿಗೂ ಸೌಖ್ಯವುಂಟಾಗುತ್ತವೆ. ಇವೆಲ್ಲ ಬಿಟ್ಟು ನಾವು ಕೇವಲ ಇಂದ್ರಿಯಗಳ ಸಂಯಮನ ಮಾಡಬೇಕೆಂಬುದು ಶುದ್ಧ ತಪ್ಪು. ಆಯಾ ಇಂದ್ರಿಯಗಳಿಗೆ ಯೋಗ್ಯವಾದ ವ್ಯಾಯಾಮವು ನಿಸರ್ಗ ನಿಯಮಕ್ಕನುಸರಿಸಿ ದೊರೆ

ಯಲೇಬೇಕು. ಅಂದರೇನೇ ಜೀವಕ್ಕೆ ಶಾಂತಿ! ಅದೇ ಆರೋಗ್ಯದ ಬೀಜ ಮಂತ್ರ. ನಾವು ಅರ್ಥವಿಲ್ಲದ ನೈತಿಕ ಕಟ್ಟಳೆಗಳನ್ನು ಮಾಡಿಟ್ಟ ಮಾತ್ರಕ್ಕೆ ಪ್ರಕೃತಿಯು ಅದನ್ನು ಪಾಲಿಸುವದೇ ? ಅದು ತನ್ನ ಕಾರ್ಯವನ್ನು ಮಾಡ ತಕ್ಕದ್ದೇ. ಅದು ಕುಮಾರಿ, ಅಥವಾ ವಿಧವೆಯೆಂಬುದನ್ನು ನೋಡುವ ದಿಲ್ಲ. ಆದುದರಿಂದ ವಿವಾಹ ಸಂಸ್ಥೆಗಳಲ್ಲಿ ತೀವ್ರ ಬದಲಾವಣೆಯಾಗಿ ಯೋಗ್ಯ ದಂಪತಿಗಳ ಜೋಡಣೆಯಾಗಲು ಸಾಕಷ್ಟು ಸೌಕರ್ಯಗಳು ಉಂಟಾಗಬೇಕು. ವಿಧವಾ ವಿವಾಹ ಮೊದಲಾದವು ನಿರಾತಂಕವಾಗಿ ಪ್ರಚಾರದಲ್ಲಿ ಬರಬೇಕು. ಅಂದರೆ ಯಾವ ಅನ್ಯಾಯ-ಅತ್ಯಾಚಾರಗಳೂ ನಡೆಯುವದಿಲ್ಲ. ಸುಪ್ರಜಾಜನನಕ್ಕೆ ಯೋಗ್ಯ ವಾತಾವರಣವು ನಿರ್ಮಾಣವಾಗಿ ಬಲಶಾಲಿಗಳೂ, ಸದೃಢರೂ ಆದ ಮಕ್ಕಳು ಹುಟ್ಟುವರು. ಇಷ್ಟೆಂದ ಮಾತ್ರಕ್ಕೆ ಲಗ್ನಸಂಸ್ಥೆಗಳೇ ಬೇಡವೆಂದು ನಮ್ಮ ಅಭಿಪ್ರಾಯವಲ್ಲ ಲಗ್ನಸಂಸ್ಥೆಗಳು ಬೇಕು. ಆದರೆ ಅವು ಇಡೀ ಮಾನವ ಜಾತಿಯ ಸುಖಕ್ಕಾಗಿ ವಿಶಾಲದೃಷ್ಟಿಯಿಂದ ಕಾರ್ಯನಡೆಸುವ ಸಂಸ್ಥೆಗಳಾಗಬೇಕು.

ಗಂಡಸರ ಬೇನೆಗಳಿಗಿಂತಲೂ ಹೆಂಗಸರ ಬೇನೆಗಳು ಜನನೇಂದ್ರಿಯಕ್ಕೆ ಸಂಬಂಧಪಟ್ಟ ಬೇನೆಗಳೇ ಆಗಿರುತ್ತವೆ. ಜನನೇಂದ್ರಿಯಗಳಿಗೆ ತಕ್ಕವ್ಯಾಯಾಮವಿಲ್ಲದಂತಾದರೆ ಈ ಬೇನೆಗಳು ಉಂಟಾಗುವವು. ತಲೆಸೂಲೆ, ಮುಟ್ಟಿನ ದೋಷ, ಉನ್ಮಾದ, ದೆವ್ವಬಡಿಯುವದು ಮುಂತಾದ ಅನೇಕ ರೋಗಗಳು ಇದರಿಂದಲೇ ಉಂಟಾಗುವವು. ಹೆಣ್ಣು ಮಕ್ಕಳ ಜನನೇಂದ್ರಿಯಗಳಿಗೆ ಯೋಗ್ಯ ವ್ಯಾಯಾಮ ದೊರೆಯದ ಹೊರತು ಇವೆಂದಿಗೂ ಹೋಗಲಾರವು. ಬರೀ ಚಿಕಿತ್ಸೆ, ಔಷಧೋಪಚಾರಗಳಿಂದ ಇವು ವಾಸಿಯಾಗುವದರ ಬದಲು ಏನಾದರೂ ಅಡ್ಡ ಬೇನೆಗಳೇ ಸೇರುವ ಸಂಭವವಿರುತ್ತದೆ. ಆದುದರಿಂದ ಲೈಂಗಿಕ ವಿಷಯದ ಜ್ಞಾನವನ್ನು ಮಾಡಿಕೊಂಡು, ಸ್ವರ್ಗನರಕಗಳೆಂಬ ಪೊಳ್ಳು ಬೆದರಿಕೆಗೆ ಬಲಿಬೀಳದೆ ನಿಷ್ಪಕ್ಷ ಬುದ್ಧಿಯಿಂದ ಲೈಂಗಿಕ ರೋಗಗಳ ನಿವಾರಣೆಗೆ ಯತ್ನಿಸಬೇಕು. ನಮ್ಮ ಈ ಕಣ್ಣುಮುಚ್ಚಾಟದಿಂದಲೇ ವೇಶ್ಯಾವೃತ್ತಿಯು ಬೆಳೆದಿದೆ. ಸ್ತ್ರೀಯರ ಹಾಗು ಮಕ್ಕಳ ಬೇನೆಗಳು ಬೆಳೆದಿವೆ. ಒಳ್ಳೇ ದಾಂಪತ್ಯ ಜೀವನಕ್ಕೆ ಆಸ್ಪದವಿಲ್ಲದೆ ಇರುವದರಿಂದ ಕದ್ದುಮುಚ್ಚಿ ವ್ಯಭಿಚಾರ, ಅನಾಚಾರಗಳು

ಆರಂಭವಾಗಿವೆ. ಕುಂಟಲಗಿತ್ತಿಯರ ಹಾವಳಿಯು ಹೆಚ್ಚಾಗಿ, ದುಡ್ಡಿನ ಸುಲಿಗೆ ವಿಪರೀತವಾಗಿದೆ. ಹೆಣ್ಣು-ಗಂಡಿನ ವ್ಯಾಜ್ಯಗಳ ಮೂಲಕ ಕೊಲೆ ಪುಂಡಾಟಿಕೆಗಳು ಕೂಡ ಅಲ್ಲಲ್ಲಿ ನಡೆಯುತ್ತಲಿವೆ. ಗನೋರಿಯಾ, ಗರ್ಮಿ, ಪರಮಾ ಮೊದಲಾದ ಬೇನೆಗಳು ಎಲ್ಲಿ ನೋಡಿದಲ್ಲಿ ಹರಡಿಕೊಂಡಿವೆ. ದ್ವೇಷ ಅಸೂಯಾದಿ ಗುಣಗಳ ವೃದ್ಧಿಯಾಗಿ ಪಶುಜೀವನಕ್ಕಿಂತ ಮಾನವನ ಜೀವನವು ಕೀಳಾಗಿ ಕುಳಿತಿದೆ. ಈ ಎಲ್ಲ ಕಾರಣಗಳಿಂದ ಪ್ರೇಮವು ಜೀವಿತದ ಒಂದು ಮಧುರತರವಾದ ವರಪ್ರದಾನವಾಗುವ ಬದಲು ದುಃಖ ಹಾಗು ರೋಗಗಳನ್ನು ನಿರ್ಮಿಸುವ ಶಾಪವಾಗಿದೆ. ಆದುದರಿಂದ ಪ್ರಕೃತಿ ಧರ್ಮಕ್ಕನುಸಾರವಾದ ನೀತಿ ಧರ್ಮವನ್ನು ಕಂಡು ಹಿಡಿಯುವದು ಪ್ರತಿಯೊಬ್ಬನ ಕರ್ತವ್ಯವಾಗಿದೆ ಈಗಿನ ನೀತಿಶಾಸ್ತ್ರವೆಂದರೆ ವಿವಿಧ ತತ್ವಗಳ ಮಿಶ್ರಣವಾಗಿದೆ. ರಾಷ್ಟ್ರಗಳ ಮತಗಳೂ ಭಿನ್ನವಾಗಿವೆ. ಪ್ರತಿಯೊಬ್ಬರೂ ನಿಸರ್ಗ ಧರ್ಮದ ಕಡೆಗೆ ಅಲಕ್ಷ್ಯಮಾಡಿದ್ದಾರೆ. ಎಲ್ಲರೂ ಅಧಿಕಾರ ಮತ್ತು ಪೊಳ್ಳು ವೇದಾಂತಗಳನ್ನೇ ಅನುಸರಿಸುತ್ತಿದ್ದಾರೆ. ಎಲ್ಲಿ ನೋಡಿದಲ್ಲಿ ಲೈಂಗಿಕ ಹತ್ಯಾಂಕಾಂಡಗಳು ನಡೆದು ನಿರಪರಾಧಿ ತರುಣ ತರುಣಿಯರು ಬಲಿಯಾಗುತ್ತಿದ್ದಾರೆ. ಪ್ರಕೃತಿ ಧರ್ಮವನ್ನು ಪಾಲಿಸದೆ ಇದ್ದವರು ಪಾಪಿಗಳೆಂಬುದನ್ನು ಶಾರೀರಿಕ ಆರೋಗ್ಯ ಧರ್ಮವನ್ನು ಬಲ್ಲಂಥ ಪ್ರತಿಯೊಬ್ಬರೂ ಒಪ್ಪಬೇಕಾದ ಸಂಗತಿಯಾಗಿದೆ. ಅವರಿಗೆ ಕಾಲಕಾಲಕ್ಕೆ ನಿಸರ್ಗದೇವಿಯು ತಕ್ಕಪ್ರಾಯಶ್ಚಿತ್ತವನ್ನು ಕೊಡುತ್ತಲೇ ಇರುತ್ತಾಳೆ. ನಿಸರ್ಗ ನಿಯಮವನ್ನುಲ್ಲಂಘಿಸಿ ಲೈಂಗಿಕ ವಿಕಾರಗಳನ್ನು ತಡೆಹಿಡಿಯುವದರಿಂದ ಯಾವ ಲಾಭವೂ ದೊರೆಯಲಾರದು. ಅದರಿಂದ ಜ್ಞಾನಹೀನನೂ, ಗುಣಹೀನನೂ ಆಗಿ ಜನತೆಯಿಂದ ತಿರಸ್ಕಾರಕ್ಕೆ ಮಾತ್ರ ಪಾತ್ರವಾಗಬೇಕಾಗುವದು. ಒತ್ತಾಯದ ಬ್ರಹ್ಮಚರ್ಯೆಯಿಂದ ವಿವಿಧ ರೋಗಗಳುಂಟಾಗುತ್ತವೆಯೆಂಬುದು ನಿರ್ವಿವಾದ. ಅದೇ ಮೇರೆಗೆ ಸ್ತ್ರೀಯರ ಜನನೇಂದ್ರಿಯ ರೋಗಗಳು ಹೇಗೆ ವುಂಟಾಗುತ್ತವೆಂಬುದನ್ನು ವಿಚಾರಿಸೋಣ.



# ರಕ್ತ ಕ್ಷಯ (Chlorosis



ಇದು ಎಲ್ಲ ಕಡೆಗೂ ಹಬ್ಬಿದ ಸಾಮಾನ್ಯವಾದ ರೋಗವೇ ಆಗಿರುವದರಿಂದ ಇದರ ವಿಚಾರವನ್ನು ಅರಿತುಕೊಳ್ಳುವದು ಮಹತ್ವದ ಸಂಗತಿಯಾಗಿದೆ. ಇದು ಮುಖ್ಯವಾಗಿ ಹೆಂಗಸು ಮೈನೆರೆದು ಮುಟ್ಟು ನಿಲ್ಲುವ ಕಾಲಾವಧಿಯಲ್ಲಿ ಅಂಟಿಕೊಳ್ಳುವ ರೋಗವು. ಗರ್ಭಪಾತಾದಿ ದೋಷಗಳಿಂದ ವಿವಾಹಿತ ಸ್ತ್ರೀಯರಿಗೆ ಇದು ಹಿಡಿಯತಕ್ಕ ರೋಗವು, ಮೈನೆರಿಯುವ ಪೂರ್ವದಲ್ಲಿ ಅಥವಾ ಮುಟ್ಟು ಪೂರ್ಣವಾಗಿ ನಿಂತ ಬಳಿಕ ಅಂದರೆ ೧೪ ವರ್ಷದ ಮುಂಚೆ ಅಥವಾ ೪೫—೫೦ ವರ್ಷಗಳ ಮೇಲೆ ಈ ಬೇನೆಯು ಬರುವದಿಲ್ಲ. ಇದರ ಮೇಲಿಂದ ಜನನೇಂದ್ರಿಯಗಳ ಉಪಯೋಗಕ್ಕೂ ಈ ಬೇನೆಗೂ ನಿಕಟಸಂಬಂಧವುಂಟೆಂಬುದನ್ನು ಬೇರೆಯಾಗಿ ಹೇಳುವದಗತ್ಯವಿಲ್ಲ.

ಇದರ ಲಕ್ಷಣಗಳು:— ಮೊದಲಿನಿಂದಲೂ ಬಡಕಾಗಿದ್ದವಳು (ನಾಜೂಕ) ಜನನೇಂದ್ರಿಯಗಳ ವಿಕಾಸಕ್ಕನುಗುಣವಾಗಿ ಹೆಚ್ಚು ಸಶಕ್ತ ಮತ್ತು ಉತ್ಸಾಹ ಭರಿತಳಾಗದಿರುವಾಗ ಮೈನೆರೆಯುವದರಿಂದ ಅಂಥವಳು ಮತ್ತಿಷ್ಟು ಅಶಕ್ತಳೂ ಕೋಮಲೆಯೂ ಆಗುತ್ತಾಳೆ. ಇಂಥವಳಿಗೆ ಜನನೇಂದ್ರಿಯಗಳ ಉಪಯೋಗಕ್ಕೆ ಆತಂಕವಾದರೆ ಅಥವಾ ಪ್ರೇಮ ಭಂಗದಂಥ ಪ್ರಸಂಗಗಳು ಬಂದೊದಗಿದರೆ ಮುಟ್ಟು ಕಟ್ಟಾಗುವದು. ಅಥವಾ ಸರಿಯಾಗಿ ಆಗದು. ಇದರಿಂದ ಈ ಬೇನೆಯು ಒಮ್ಮೆಲೆ ಅಂಟಿಕೊಳ್ಳುವದು. ಅವಳು ತೀರ ರೋಗಿಷ್ಠಳಾಗುವಳು; ಹಸಿವೆ ಕಟ್ಟಾಗುವಧು, ಶಕ್ತಿಯು ಕುಗ್ಗುವದು; ಸ್ವಲ್ಪ ಶ್ರಮದಿಂದ ದಣಿವು ವುಂಟಾಗುವದು; ಎದೆ ಹಾರುವದು; ಉಸುರುಗಟ್ಟುವದು; ಅಗ್ನಿಮಾಂದ್ಯ ಮತ್ತು

ಮಲಬದ್ಧತೆಗಳುಂಟಾಗುವವು. ಉತ್ಸಾಹವು ಕುಗ್ಗಿ ಚಂಚಲಳೂ, ಉದಾಸೀನಳೂ, ಏಕಾಂತಪ್ರಿಯಳೂ ಆಗುವಳು. ಆಗ ಎಲ್ಲರಿಗೂ ಈ ಬೇನೆಯ ಸಂದೇಹ ಬರುವದು. ಹೀಗೆಯೇ ಈ ಬೇನೆಯನ್ನು ಬಲಿಯಗೊಟ್ಟರೆ ಲಕ್ಷಣಗಳು ಉಗ್ರ ಸ್ವರೂಪವನ್ನು ಹೊಂದುವವು. ಜಠರವು ಕೆಟ್ಟು ಹುಳಿ ಸುಡುವುದು, ತೇಗು ಬರುವದು, ಅಪಥ್ಯಕರವಾದ ಹುಳಿ ಹಣ್ಣುಗಳನ್ನು, ಖಡು-ಪಾಟೀ ಪೆನ್ಸಿಲ್ ವೊದಲಾದ ಪದಾರ್ಥಗಳನ್ನು ತಿನ್ನುವ ಲವಲವಿಕೆಯಾಗುವದು. ನಾಲಿಗೆಯ ಮೇಲೆ ಬೆಳ್ಳಗಿನ ಪದರು ಕಾಣುವದು ಬಾಯಿಯಿಂದ ಹೊಲಸವಾಸನೆ ಬರುವದು. ತೇಜಹೀನವಾಗಿ ಮುಖವು ಬೆಳ್ಳಗಾಗುವದು. ತುಟಿಗಳು ಒಸಡೆಗಳು ನಿಸ್ತೇಜ ಮತ್ತು ರಕ್ತಹೀನವಾಗಿ ಕಾಣುವವು. ಬಲವಾದ ತಲೆಸೂಲೆ, ನೆತ್ತಿಯಲ್ಲಿ ಹೊಡೆತ, ಮೈ ಚುಚ್ಚುವದು, ಏನೋ ಭಾರ ಹೇರಿದಂತಾಗುವದು. ಎಲ್ಲ ಇಂದ್ರಿಯಗಳೂ ಶಕ್ತಿಹೀನವಾಗುವವು. ಕಾಣದಂತೆ ಕೇಳದಂತೆ ಭಾಸವಾಗತೊಡಗುವದು. ಮಾನಸಿಕ ಶಕ್ತಿಗಳ ಹ್ರಾಸವಾಗಿ ಸ್ಮರಣಶಕ್ತಿ ಕುಗ್ಗಿಹೋಗುವದು ಉನ್ಮಾದದ ಲಕ್ಷಣಗಳು ತೋರತೊಡಗುವವು. ಈ ಭಯಂಕರ ರೋಗಕ್ಕೆ ಕಾರಣವೆಂದರೆ ಹುಡುಗಿಯರ ಆರೋಗ್ಯ ವಿಕಾಸದ, ವಿಶೇಷವಾಗಿ ಜನನೇಂದ್ರಿಯಗಳ ವಿಕಾಸದ ಕಾರಣಗಳ ಕಡೆಗೆ ಅಲಕ್ಷ ಮಾಡುವದು. ಸಾಹಸ, ಧೈರ್ಯ, ಶಾರೀರಿಕ ಶಕ್ತಿ, ದಿಟ್ಟತನ ಇವುಗಳು ಹೆಂಗಸರಿಗೆ ಶೋಭಿಸುವದಿಲ್ಲ. ಅವರು ಕೋಮಲಾಂಗಿಯರೂ, ವಿನಯವತಿಯರೂ, ಲಜ್ಜಾವತಿಯರೂ ಆಗಿರಬೇಕು. ಅವರೇ ನಿಜವಾದ ಸ್ತ್ರೀಯರು ಉಳಿದವರು ಗಂಡುಬೀರಿಯರು ಎಂಬ ತಪ್ಪು ಕಲ್ಪನೆಯನ್ನು ಹಿಂದಿನ ಹಿರಿಯರು ಪ್ರಚಾರ ಮಾಡಿದ್ದಾರೆ. ಅದರಿಂದ ಗಂಡಸಿನಲ್ಲಿ ತಾನು ಸ್ತ್ರೀ ಸಂರಕ್ಷಕನೆಂಬ ಒಣ ಹೆಮ್ಮೆಯು ಬೇರೂರಿದೆ. ಸ್ತ್ರೀಯರೆಂದರೆ ಕೇವಲ ಗಂಡಸಿನ ಗುಲಾಮರೆಂಬ ಕಲ್ಪನೆಯು ಗಂಡಸರಲ್ಲಿ ಹುಟ್ಟಿಕೊಂಡಿದೆ. ಇದು ಕೇವಲ ಹುಚ್ಚುತನವೇ ಸರಿ. ಹೆಂಗಸರಲ್ಲಿಯೂ ಗಂಡಸರಲ್ಲಿಯೂ ಸ್ವಾಭಾವಿಕವಾದ ಯಾವ ವ್ಯತ್ಯಾಸವೂ ಇರುವದಿಲ್ಲ. ಗಂಡಸಿನಂತೆ ಹೆಂಗಸಿಗಾದರೂ ಶಾರೀರಿಕ ಸಾಮರ್ಥ್ಯ, ಸಾಹಸ, ಧೈರ್ಯ, ಚಟುವಟಿಕೆಗಳು ಭೂಷಣಾಸ್ಪದವಾಗಿವೆ. ಅವರಿಗೂ ಶಾರೀ

ರಿಕ ವ್ಯಾಯಾಮದ ಆವಶ್ಯಕತೆಯು ಅಷ್ಟೇ ಇದೆ. ಹೆಂಗಸಿನ ಸದ್ಗುಣ ಗಳು ಬೇರೆ, ಗಂಡಸಿನ ಸದ್ಗುಣಗಳು ಬೇರೆಯೆಂಬ ಮಾತಿನಲ್ಲಿ ಅರ್ಥ ವಿಲ್ಲ. ಇಬ್ಬರ ಶಾರೀರಿಕ, ಮಾನಸಿಕ ವಿಕಾಸಗಳ ತತ್ವಗಳೂ ಒಂದೇ ಆಗಿವೆ. ನಾವು ಮಾತ್ರ ನಮ್ಮ ಮೂಢ ಸಂಸ್ಕಾರಗಳ ಮೂಲಕ ಹೆಣ್ಣು ಮಕ್ಕಳೆಂದರೆ ಕೀಳೆಂದು ಭಾವಿಸಿ ಅವರ ಶಿಕ್ಷಣದ ಕಡೆಗೆ ಅಲಕ್ಷ್ಯಮಾಡಿ ಅವರನ್ನು ಅಬಲೆಯರನ್ನಾಗಿ ಮಾಡಿಟ್ಟಿದ್ದೇವೆ. ಹೆಂಗಸು ನಲಿದಾಡುತ್ತಿ ರುವ ಕ್ಷೇತ್ರಗಳಲ್ಲೆಲ್ಲ ಅದೃಶ್ಯ ಸರಪಳಿಯಂತೆ ಪಾತಿವ್ರತ್ಯದ, ಪಾವಿತ್ರ್ಯದ, ಬ್ರಹ್ಮಚರ್ಯದ, ಸುಕುಮಾರಿತನದ ಸ್ತ್ರೀ. ಸದ್ಗುಣದ ಆಕುಂಚಿತ ಹಾಗು ಸತ್ವವನ್ನು ಹೀರುವ ಭಾವನೆಗಳು ಅವಳನ್ನು ಬಂಧಿಸುತ್ತಿವೆ. ತನಗೆ ಹೊಳೆದಂತೆ, ಕಡಂತೆ, ತಿಳಿದಂತೆ, ನಿಯಂತ್ರಣವಿಲ್ಲದೆ ವಿಚಾರಿಸಲು, ಆಚ ರಿಸಲು ಅವಳಿಗೆ ಸ್ವತಂತ್ರತೆಯಿಲ್ಲ. ಒಟ್ಟಾರೆ ಹೇಳುವದೆಂದರೆ ಸುದೈವಿ ಯಾದ ಗಂಡಸು ಮಾಡಬಹುದಾದ ಯಾವ ಕೆಲಸಗಳನ್ನೂ ಅವಳು ಮಾಡಕೂಡದು. ಹೆಂಗಸಿನ ಪಾವಿತ್ರ್ಯದ ಬಗ್ಗೆ ತಿಳಿದುಕೊಂಡಿದ್ದ ಮೂಢ ಕಲ್ಪನೆಗಳೇ ಈ ವಿಚಿತ್ರ ವಿಚಾರಸರಣಿಯ ಕಾರಣಗಳೆನ್ನಬಹುದು. ಈ ಕಾರಣದಿಂದಲೇ ಹೆಂಗಸರು ವೀರರಮಣಿಯರಾಗಿರದೆ ಅಬಲೆಯರಾಗಿ ಉಳಿದಿದ್ದಾರೆ. ಅವರ ಸಂತಾನವು ದಿನದಿನಕ್ಕೂ ನಿರ್ಬಲ ಸಂತಾನವಾಗ ತೊಡಗಿದೆ.

ಅವಳಿಗೆ ಕೊಡತಕ್ಕ ಶಿಕ್ಷಣವು ತಪ್ಪು, ಶಿಕ್ಷಣವಿದ್ದು ದುಃಖ, ಹೇಡಿ ತನ ಮತ್ತು ಬೇನೆಗಳಿಗೆ ಆಸ್ಪದವುಳ್ಳದ್ದಾಗಿದೆ ಅವಳಿಗೆ ಅವಶ್ಯವಿದ್ದ ಶಾರೀರಿಕ ವ್ಯಾಯಾಮ, ತಿರುಗಾಟದ ಸ್ವಾತಂತ್ರ್ಯವಿಲ್ಲದ್ದರಿಂದ ಅವಳಲ್ಲಿ ಸಹನಶಕ್ತಿ ಇಲ್ಲದಂತಾಗಿ ನಿರ್ಬಲತೆಯು ಹೆಚ್ಚುತ್ತದೆ. ಜನನೋತ್ಪಾನ ಶಕ್ತಿಗೆ ಬೇಕಾದ ಕಸುವಿನ ಅಭಾವದ ಮೂಲಕ ಪ್ರತಿ ತಿಂಗಳು ೩—೪ ಔಂಸಿನಷ್ಟು ರಕ್ತವನ್ನು (ಮುಟ್ಟಿನ ರೂಪದಿಂದ) ಕಳೆದುಕೊಳ್ಳುವಷ್ಟು ಸಾಮರ್ಥ್ಯವು ಇಲ್ಲದಂತಾಗಿ ರಕ್ತಕ್ಷಯದಂಥ ಬೇನೆಯಿಂದ ಬಳಲಬೇ ಕಾಗಿದೆ. ಈ ಬೇನೆಯು ಲೈಂಗಿಕ ವಿಷಯಗಳ ಮೂಲಕವೇ ಆಗುವದು. ಮುಷ್ಟಿ ಮೈಥುನವೇ ಇದಕ್ಕೆ ಕಾರಣವು. ಗಂಡುಮಕ್ಕಳಲ್ಲಿ ಪ್ರಚಾ

ರದಲ್ಲಿದ್ದಂತೆ ಹೆಣ್ಣುಮಕ್ಕಳಲ್ಲಾದರೂ ಈ ರೂಢಿಯು ಬಳಕೆಯಲ್ಲಿರುತ್ತದೆ. ಆದರೆ ನಾಚಿಕೆಯ ಮೂಲಕ ಇದನ್ನು ಕಂಡುಹಿಡಿಯುವದು ಕಷ್ಟವಾಗಿದೆ. ತಮ್ಮ ತಳಮಳವನ್ನು ಹಿರಿಯರ ಮುಂದೆ ಸ್ಪಷ್ಟವಾಗಿ ತಿಳಿಸಿ ಅದನ್ನು ಶಮನಮಾಡುವ ಮಾರ್ಗವನ್ನು ತೋರಿಸಿರೆಂದು ಬಿಚ್ಚಿ ಹೇಳುವ ಧೈರ್ಯ ತಪ್ಪುಗಾರರಲ್ಲಿ ಇಲ್ಲ. ಹೇಳಿದರೆ ಏನು ವಿಪರೀತ ತಿಳಿದುಕೊಳ್ಳುವರೋ ಎಂಬ ಭಯ ಬೇರೆ! ಹಾಯ್ ಸಮಾಜವೇ, ತರುಣ ತರುಣಿಯರನ್ನು ಒಳ್ಳೇ ಮಾರ್ಗಕ್ಕೆ ಹಚ್ಚುವದು ನಿನ್ನ ಕೈಯಲ್ಲಿದ್ದೂ ಇಲ್ಲದ ಕಟ್ಟುಗಳನ್ನು ಒಡ್ಡಿ ಜೀವನವನ್ನು ಕೆಡಿಸುವೆಯಲ್ಲ! ತರುಣರ ವಿಕಾರ ತೃಪ್ತಿಗೆ ಸಕಾಲಕ್ಕೆ ಸರಿಯಾದ (ನೀತಿಗನುಸರಿಸಿಯೇ) ನೌಕರ್ಯಗಳನ್ನು ಒದಗಿಸುವದು ಸಮಾಜದ ಹಿರಿಯರ ಕರ್ತವ್ಯ! ಇಲ್ಲವಾದರೆ ಅಸ್ವಾಭಾವಿಕದಾರಿಯಿಂದ ತೃಪ್ತಿಯನ್ನು ಪಡಯಲೆತ್ನಿಸಿ ತರುಣ ತರುಣಿಯರು ಬಲಹೀನರಾಗುವರು.

ಮುಷ್ಟಿಮೈಥುನ ಮಾತ್ರದಿಂದಲೇ ಅಲ್ಲ ವಿವಿಧ ಅತೃಪ್ತ ಕಾಮುಲಾಲನೆಗಳಿಂದಲೂ ಸ್ತ್ರೀಯಲ್ಲಿ ಈ ಬೇನೆಯು ಹುಟ್ಟುವದು. ಅವಳ ಬಯಕೆಗಳು ಪ್ರೇಮಕ್ಕೆ ಸಂಬಂಧಿಸಿರುವವು. ಅದೇ ವಿಚಾರದಲ್ಲಿ ಅವಳು ಮಗ್ನಳಾಗಿರುವಳು. ಆಗ ಅವಳನ್ನು ಸಮಾಧಾನ ಪಡಿಸಲು ಆಪ್ತೇಷ್ಟರು ಯಾವ ಹಂಚಿಕೆ ಮಾಡಿದರೂ ಸಾಧ್ಯವಿಲ್ಲ. ವಿಕಾಸ ಹೊಂದಿದ ಅವಳ ಜನನೇಂದ್ರಿಯಗಳು ತೃಪ್ತಿಗಾಗಿ ಒತ್ತಾಯ ಪಡಿಸುತ್ತಲಿರುವವು. ಅವಳಿಗೆ ಪ್ರೀತಿಯ ವಸ್ತುಗಳು ಬೇಕಾಗಿರದೆ ಪ್ರಿಯಕರನು ಬೇಕಾಗಿರುತ್ತಾನೆ. ಕಾಮುವಿಕಾರದಿಂದ ಪೀಡಿತರಾದ ಮೈನೆರೆದ ಹೆಣ್ಣುಮಕ್ಕಳಿಗೆ ಸಹವಾಸ ಲಾಭವಿಲ್ಲದ್ದಾದರೆ ಹೇರಳವಾದ ದುಃಖವಾಗಿ ಕೊರಗಹತ್ತುವರು. ಈ ದುಃಖದಿಂದ ಎಷ್ಟೋ ಕುಮಾರಿಯರು, ಬಾಲ ವಿಧವೆಯರು, ಮೂರ್ಖರಾದ ಗಂಡಂದಿರು ಬಿಟ್ಟುಕೊಟ್ಟಿರುವ ಸಧವೆಯರು ಕೊರಗಿ ಕೊರಗಿ ಕಣ್ಣೀರಿಡುತ್ತಿರುವದನ್ನು ನಿತ್ಯವೂ ಕಾಣುತ್ತೇವೆ. ಇವರ ದುಃಖಾಶ್ರುಗಳಿಂದ ಎಷ್ಟೋ ಕಡಲುಗಳು ನಿರ್ಮಾಣವಾಗಬಹುದು, ಇವರ ನಿಟ್ಟುಸಿರಿನಿಂದ ಎಷ್ಟೋ ಹಡಗಗಳು ನಡೆಯಬಹುದು. ನೀತಿವಂತರಿಗೆ ಇದರ ಕಲ್ಪನೆ ಕೂಡ ಇರುವದಿಲ್ಲ. "ಪರೋಪದೇಶೆ ಪಾಂಡಿತ್ಯಂ ಸರ್ವೇಷಾಂ ಸುಕರಂ

ನೃಣಾಂ" ಎಂಬಂತೆ ಉಪದೇಶ ಮಾಡುವದೊಂದು ಅವರಿಗೆ ಗೊತ್ತು. ಈ ಕಣ್ಣು ಮುಚ್ಚಾಟದಿಂದ ಲೈಂಗಿಕ ಬೇನೆಗಳು ಎಷ್ಟೊಂದು ಹರಡಿ ಕೊಂಡಿವೆಯೆಂಬುದನ್ನು ಅವರು ವಿಚಾರವನ್ನೇ ಮಾಡುವದಿಲ್ಲ.

ಈ ರಕ್ತಕ್ಷಯದ ಬೇನೆ ನಿವಾರಣೆಗೆ ಉಪಾಯವೆಂದರೆ ಆರೋಗ್ಯ ವನ್ನು ಬೆಳೆಯಿಸಿ, ವ್ಯಾಯಾಮ, ಜಲಚಿಕಿತ್ಸೆ, ಬೈಲು ಹವೆಯ ಸೇವನೆ ಇತ್ಯಾದಿಗಳಿಂದ ಹಸಿವೆಯನ್ನು ಹೆಚ್ಚಿಸಲಿಕ್ಕೆ ಯತ್ನಿಸುವದು. ತೊಪ್ಪ ಲಪಲ್ಲೆ, ತವಡುಸಹಿತವಾದ ಗೋದಿಹಿಟ್ಟಿನ ರೊಟ್ಟಿ, ಜೋಳದ ರೊಟ್ಟಿ ಮುಂತಾದ ಒಳ್ಳೇ ಆಹಾರಗಳನ್ನು ತೆಗೆದುಕೊಳ್ಳುವದು. ಮಹತ್ವದ ನೈಸರ್ಗಿಕ ಉಪಾಯವೆಂದರೆ ರೋಗದ ಮೂಲ ಕಾರಣವಾದ ಕಾಮವಿ ಕಾರಗಳ ಅತೃಪ್ತಿಯನ್ನು ಹಿಂಗಿಸುವದು. ಅರ್ಥಾತ್ ಈ ರೋಗದಿಂದ ಬಳಲುವ ಕುಮಾರಿಕೆಯರಿಗೆ, ವಿಧವೆಯರಿಗೆ ಶೀಘ್ರವಾಗಿ ಲಗ್ನ ಬಂಧ ನದಲ್ಲಿ ತೊಡಗಿಸಬೇಕು. ಸುಪ್ರಸಿದ್ಧ ಫ್ರೆಂಚ್ ಡಾಕ್ಟರರಾದ ಅಂಡ್ರಲ್ಲರು 'ರಕ್ತ ಕ್ಷಯಿಗಳಿಗೆ ಆದಷ್ಟು ಬೇಗನೆ ರತಿಕ್ರೀಡೆಗೆ ಆಸ್ಪದ ಮಾಡಿಕೊಟ್ಟರೆ ಅದು ಹೇಳಹೆಸರಿಲ್ಲದೆ ಹೋಗುವದು' ಎಂದು ಹೇಳಿದ್ದಾರೆ. ಡಾ. ಅಶ್ವಿಲ್ಲ ರಾದರೂ 'ಲಗ್ನದಿಂದ ರಕ್ತಕ್ಷಯವು ಬೇಗನೆ ವಾಸಿಯಾಗುವದು. ಆದರೆ ಕೆಲವು ಅಡಚಣೆಗಳ ಮೂಲಕ ಲಗ್ನವು ಸುಲಭಸಾಧ್ಯವಾದ ಮಾತಲ್ಲವಾ ದ್ದರಿಂದ ಡಾಕ್ಟರರು ಈ ಸಂಗತಿಯನ್ನು ಹೇಳುವದಿಲ್ಲ' ಎಂದಿದ್ದಾರೆ. ಸಾಮಾಜಿಕ, ಧಾರ್ಮಿಕ ಅಡಚಣೆಗಳು ಎಷ್ಟೇ ಇದ್ದರೂ ರೋಗಿಯ ಹಿತದ ದೃಷ್ಟಿಯಿಂದ ಸಂಭೋಗದ ಉಪಾಯಗಳನ್ನು ಡಾಕ್ಟರರು ಹೇಳಿ ಬಿಡುವದು ಅವರ ಕರ್ತವ್ಯವಿರುತ್ತದೆ. ಅಂದರೆ ಕಾಮಾತುರರಾದ ತರುಣ ತರುಣಿಯರು ಸ್ವರತಿ-ಮುಷ್ಟಿಮೈಥುನದಂಥ ಅಸ್ವಾಭಾವಿಕ ಉಪಾಯಗ ಳಿಂದ ದೇಹನಾಶವನ್ನು ಮಾಡಿಕೊಳ್ಳದೆ ವಿವಾಹಬದ್ಧರಾಗಲು ಯತ್ನವ ನ್ನಾದರೂ ಮಾಡುವರು. ಅಸ್ವಾಭಾವಿಕ ಚಟವನ್ನು ಹೋಗಲಾಡಿಸಲಿಕ್ಕೆ ಕೂಡ ಸಂಭೋಗವೇ ಸಾಧನವಾಗಿದೆ. ಜನನೇಂದ್ರಿಯದ ದುರ್ಬಲ ತೆಗೆ ಸಂಭೋಗವೇ ಉಪಾಯವೆಂದು ಹೇಳಿದರೆ ಅನೇಕರಿಗೆ ಕೋಪಬರ ಬಹುದು. ಹೆಂಗಸರಂತೂ ಒಮ್ಮೆಲೆ ಸಿಡಿದು ಬೀಳಬಹುದು. ಆದರೆ ಈ ಮಾತಿನ ಸತ್ಯಾಂಶವು ಸೂಕ್ಷ್ಮವಾಗಿ ವಿಚಾರಿಸುವ ಬಂಧುಭಗಿನಿಯ

ರಿಗೆ ತಿಳಿಯದೆ ಇರಲಿಕ್ಕಿಲ್ಲ. ನಿಸರ್ಗವು ತನ್ನಾಟವನ್ನು ನಡೆಸಿಯೇ ಇರುತ್ತದೆ:ದ ಬಳಿಕ ಒಂದಿಲ್ಲೊಂದು ದಿವಸ ಇದು ಬೈಲಿಗೆ ಬೀಳತಕ್ಕದ್ದೇ. ಲೈಂಗಿಕ ವಿಷಯಗಳ ಅಜ್ಞಾನವನ್ನು ಹೋಗಲಾಡಿಸಿ ಅಸ್ವಾಭಾವಿಕ ಚಟಗಳನ್ನು ಹೋಗಲಾಡಿಸುವದಕ್ಕಾಗಿ ಪ್ರಯತ್ನ ಮಾಡಬೇಕೆನ್ನುವ ಶಾಸ್ತ್ರಜ್ಞರನ್ನೂ, ಲೇಖಕರನ್ನೂ ಕಠೋರತನದಿಂದ ಶಿಕ್ಷಿಸಬೇಕೆಂದು ಕೂಡ ಹೊಂಚುಹಾಕುವ ನೀತಿವಂತರು ಕೆಲವು ಜನರಿದ್ದಾರೆ. ಆದರೆ ಸಮಾಜದಲ್ಲಿ ನಡೆದ ಘನಘೋರ ಪಾಪಗಳು ಇಂಥವರಿಂದಲೇ ಆಗುತ್ತವೆಂಬುದನ್ನು ಪ್ರಕೃತಿಯು ತನ್ನ ನಿಯಮಕ್ಕನುಸರಿಸಿ ಹೊರಗೆಡವಿಯೇ ತೀರುತ್ತದೆ.

ನಿಸರ್ಗ ನಿಯಮವು ಹೆಂಗಸರಿಗೆ ಬೇರೆ ಗಂಡಸರಿಗೆ ಬೇರೆಯಾಗಿರುವದಿಲ್ಲವೆಂಬುದನ್ನು ಈ ಮೊದಲಿನ ಅಧ್ಯಾಯದಲ್ಲಿ ಹೇಳಿಯೇ ಇದ್ದೇವೆ. ಸ್ತ್ರೀ-ಪುರುಷರಿಬ್ಬರಿಗೂ ಲೈಂಗಿಕ ವ್ಯಾಧಿಗಳಿಗೆ ಲಗ್ನವೇ ಮಹತ್ವದ ಮದ್ದು! ಲಗ್ನವಾದ ಬಳಿಕ ತಾನಾಗಿಯೇ ದುಃಖ ನಿವಾರಣೆಯಾಗಿ ಎಷ್ಟೋ ತರುಣ ತರುಣಿಯರು ಸುಖಿಯಾಗಿರುವ ಅನೇಕ ಉದಾಃಹರಣೆಗಳಿವೆ. ಈಗಿನ ಕಾಲದಲ್ಲಂತೂ ಪ್ರತಿಯೊಬ್ಬ ನೈತಿಕ ತತ್ವಜ್ಞನು, ವೈದ್ಯ-ಡಾಕ್ಟರನು, ಈ ತತ್ವದ ಕಡೆಗೆ ವಿಶೇಷವಾಗಿ ಗಮನವನ್ನು ಕೊಡಬೇಕು. ಅಂದರೇನೇ ಮಾನವನ ಆರೋಗ್ಯ, ವಿಕಾಸ, ಸೌಖ್ಯ, ಸದ್ಗುಣಗಳನ್ನು ಹೆಚ್ಚಿಸಲು ಅವಕಾಶ ದೊರೆಯುತ್ತದೆ.

ಕಾಮವಿಕಾರವೆಂದೊಡನೆ ಅದರಲ್ಲಿಯೂ ಹೆಂಗಸರ ಕಾಮವಿಕಾರವೆಂದೊಡನೆ ಒಮ್ಮೆಲೆ ತಪ್ಪು ಭಾವಿಸುವರು. ಪಾಪಿ! ನೀಚಳು! ಸ್ವೈರಿಣಿ! ಎನ್ನುವರು. ಗಂಡಸಿನಲ್ಲಿಯಂತೆ ಹೆಂಗಸಿನಲ್ಲಾದರೂ ಕಾಮವಿಕಾರಗಳು ಪ್ರಬಲವಾಗಿ ಇರುವದು ಸ್ವಾಭಾವಿಕವಾದದ್ದೇ. ಅವು ಆರೋಗ್ಯಶಾಲಿ ಜನನೇಂದ್ರಿಯಗಳ ಹಾಗು ಸ್ವಾಭಾವಿಕವಾಗಿ ವಿಕಾಸ ಹೊಂದಿದ ಲೈಂಗಿಕ ಪ್ರವೃತ್ತಿಯದ್ಯೋತಕವಾಗಿರುತ್ತವೆ. ಸರಿಯಾಗಿ-ಸಕಾಲದಲ್ಲಿ ಹೊಟ್ಟೆ ಹಸಿಯುವದು ಹೇಗೆ ಆರೋಗ್ಯದ ಲಕ್ಷಣವೋ ಹಾಗೆಯೇ ಇದಾದರೂ ಇರುತ್ತದೆ. ಇವರು ನಿಜವಾಗಿಯೂ ನಿಸರ್ಗದೇವಿಯ ಪ್ರೀತಿಯ ಮಕ್ಕಳು.

ಇವರೇ ಸುಪ್ರಜಾಜನನಕ್ಕೂ, ವಂಶರಕ್ಷಣೆಗೂ ಅರ್ಹರಾದವರು. ಆದುದರಿಂದ ಲೈಂಗಿಕ ವಿಷಯವಾಗಿ ತಿಳಿದುಕೊಂಡಿದ್ದ ತಪ್ಪು ಕಲ್ಪನೆಗಳನ್ನು ಅಳಿದು ಲೈಂಗಿಕ ಬೇನೆಗಳು ಅಂಟಿಕೊಳ್ಳದಂತೆ ಎಚ್ಚರಿಕೆಯನ್ನು ತೆಗೆದುಕೊಳ್ಳಬೇಕು. ಪ್ರತಿಯೊಬ್ಬ ಹೆಂಗಸೂ ಆರೋಗ್ಯಶಾಸ್ತ್ರವನ್ನು ಕಲಿತು ಶರೀರದ ಗುಣ-ಧರ್ಮಗಳನ್ನು ತಿಳಿದುಕೊಳ್ಳಬೇಕು. ಅಂದರೆ ಜೀವನ ಸಂಗ್ರಾಮದಲ್ಲಿ ಹೋರಾಡಲು ಅವರು ಸಮರ್ಥರಾಗುವರು. ಜನನೇಂದ್ರಿಯಗಳ ಬಗ್ಗೆ ಅಜ್ಞಾನದ ಮೂಲಕ ಹರಡಿರುವ ಕುತೂಹಲವು ಇಲ್ಲವಾಗಬೇಕಾದರೆ ಆರೋಗ್ಯಶಾಸ್ತ್ರದ ಅಧ್ಯಯನದ ಅಗತ್ಯವಿದೆ. ಇದರಿಂದ ಗೌಪ್ಯ, ಹಾಗೂ ತಿರಸ್ಕಾರ ಭಾವಗಳು ತಾವಾಗಿಯೇ ಮಾಯವಾಗುತ್ತವೆ. ಯೋಗ್ಯ ಆಹಾರ, ಉತ್ತಮ ಶಿಕ್ಷಣ ಪಡೆಯುವ ಹೆಂಗಸು ಪಾಪ ಮಾರ್ಗನನ್ನು ಹಿಡಿಯದೆ ನಿರೋಗಿಯಾಗಿ ಇರಬಲ್ಲಳು. ಮುಂದೆ ಅವಳಿಗೆ ಯೋಗ್ಯ ಕಾಲಕ್ಕೆ ವಿವಾಹ ಬದ್ಧಳನ್ನಾಗಿ ಮಾಡಿದರೆ ಅವಳಷ್ಟು ಸುಖಿಯೇ ಜಗತ್ತಿನಲ್ಲಿ ಸಿಗಲಾರರು. ಹೀಗೆ ನಮ್ಮ ಹಂಗಳೆಯರಿಗೆ ಯೋಗ್ಯ ವಾತಾವರಣನನ್ನು ನಿರ್ಮಿಸಿಕೊಟ್ಟರೆ ಹೆಣ್ಣುಮಕ್ಕಳ ಲೈಂಗಿಕ ಬೇನೆಗಳು ತಾವಾಗಿ ನಿವಾರಣೆಯಾಗುತ್ತವೆ. ಇದನ್ನೆಲ್ಲ ಬದಿಗೊತ್ತಿ ಈಗಿನ ವಿವಾಹ ಸಂಸ್ಥೆಗಳ ರಚನೆ, ಸಮಾಜ ರಚನೆ ಇದ್ದಂತೆಯೇ ಇರಬೇಕು, ಕೇವಲ ಪಾತಿವ್ರತ್ಯ-ಬ್ರಹ್ಮಚರ್ಯೆಗಳಿಂದಲೇ ಲೈಂಗಿಕ ಬೇನೆಗಳು ನಿವಾರಣೆಯಾಗಬೇಕು ಎಂದು ಹೇಳಿದರೆ ಸರ್ವಥಾಸಾಧ್ಯವಿಲ್ಲ ಈ ರೀತಿ ಹಟತೊಡುವದೇ ಆದರೆ ಈಗಲೇ ವ್ಯಭಿಚಾರ-ವೇಶ್ಯಾವೃತ್ತಿಗಳಿಂದ ಜಗತ್ತಿನಲ್ಲಿ ನಡೆದ ಘನಘೋರ ಪಾಪಗಳು-ನರಕಯಾತನೆಗಳು, ರೋಗಗಳು ಹೆಚ್ಚಿ ಮಾನವ ಜಾತಿಯು ದುಃಖಸಾಗರದಲ್ಲಿ ಮುಳುಗಿ ಹೋಗುವದರಲ್ಲಿ ಸಂದೇಹವಿಲ್ಲ.





ಸಕಾಲದಲ್ಲಿ ವಿವಾಹಕ್ಕೆ ಆಸ್ಪದವನ್ನುಂಟುಮಾಡದಿದ್ದರೆ ಕಾಮವಿಕಾರದಿಂದ
ಸ್ತ್ರೀಯು ಹುಚ್ಚಳಂತಾಗಿ ಬಿಡುವಳು.

# ಉನ್ಮಾದ (Hysteria)



ಇದು ರಕ್ತಕ್ಷಯ ಬೇನೆಗಿಂತಲೂ ಕೆಟ್ಟಬೇನೆಯು. ಇದರ ಪೀಡೆಯು ಹೆಚ್ಚಾಗಿರುವದರಿಂದ ರೋಗಿಗೂ ಅವನ ಆಪ್ತೇಷ್ಟರಿಗೂ ತುಂಬಾ ತೊಂದರೆಯಾಗುತ್ತದೆ. ಇದು ಅಶಕ್ತರಾದ ಗಂಡು-ಹೆಣ್ಣಿನಲ್ಲಿ ಕಂಡುಬರುವದಾದರೂ ಹೆಂಗಸಿನಲ್ಲಿ ಇದರ ಲಕ್ಷಣಗಳು ಹೆಚ್ಚು ಪ್ರಮಾಣದಲ್ಲಿ ಕಂಡು ಬರುತ್ತವೆ. ಇದು ಹೆಣ್ಣುಮಕ್ಕಳು ಜಿದೆಗೆ ಬಂದ ತರುವಾಯ ಅಂಟಿಕೊಳ್ಳುವ ರೋಗವಾದ್ದರಿಂದ ·ಜನನೇಂದ್ರಿಯಕ್ಕೆ ಸಂಬಂಧಪಟ್ಟ ರೋಗವೆಂದು ಅನ್ನಬಹುದು. ಜನನೇಂದ್ರಿಯಗಳ ಅಥವಾ ಭಾವನೆಗಳ ವಿಕೃತ ಪರಿಸ್ಥಿತಿಗನುಸರಿಸಿ ಆಗಾಗ್ಗೆ ಇದು ಉದ್ಭವಿಸುತ್ತಲಿರುತ್ತದೆ.

ಇದರ ಲಕ್ಷಣಗಳು:— ಹೊಕ್ಕಳ ಹತ್ತರ ಶೂಲೆ ಆರಂಭವಾಗಿ ಕರುಳಿನ ಗತಿಗನುಸರಿಸಿ ಕ್ರಮೇಣ ಗಂಟಲವರೆಗೆ ಬರುವದು. ಇಲ್ಲಿ ಅವು ಚಂಡಿನಂತೆ ಆಕಾರವನ್ನು ಹೊಂದುವದರಿಂದ ಉಸುರುಗಟ್ಟಿದಂತಾಗುವದು. ಮುಂದೆ ಉನ್ಮಾದವು ಹೆಚ್ಚಿತೆಂದರೆ ಒದರಾಟ ಚೀರಾಟ, ಹುಚ್ಚುನಗೆ ಆರಂಭವಾಗುವವು. ಧಾರಾಳವಾಗಿ ಮೂತ್ರವಿಸರ್ಜನೆ ಆದರೆ ಮಾತ್ರ ರೋಗಿಗೆ ಕೊಂಚ ಹಗುರೆನಿಸುವದು. ದೇಹ ಮತ್ತು ಮನಸ್ಸಿಗೆ ತಾಪವನ್ನುಂಟು ಮಾಡುವ ಸಣ್ಣಪುಟ್ಟ ಕಾರಣಗಳಿಂದ ಕೂಡ ಈ ರೋಗವು ಉಂಟಾಗಬಹುದು. ಉನ್ಮಾದದ ಈ ವಿಶಿಷ್ಟ ಲಕ್ಷಣಗಳಲ್ಲದೆ ಇನ್ನೂ ಕೆಲವು ಈ ರೋಗದ ಲಕ್ಷಣಗಣಳೂ ಉಂಟು. ಅಶಕ್ತತೆ, ಸೀಡಕುತನ, ಚಂಚಲತೆ, ಮಜ್ಜಾತಂತು (Nervous) ವಿನ ದುರ್ಬಲತೆ, ಯಾವ ಕೆಲಸದಲ್ಲಿಯಾದರೂ ಮನಸ್ಸು ಹಿಡಿಯದಿರುವಿಕೆ, ಇವೇ ಮೊದಲಾದವು. ಕುಮಾರಿಯತಲ್ಲಿ, ಅಥವಾ ವೈವಾಹಿಕ ಸುಖ ದೊರೆಯದಂಥ ದುರ್ದೈವಿ

ತರುಣಿಯರಲ್ಲಿ ಈ ರೋಗವು ತೀವ್ರ ಸ್ವರೂಪದಲ್ಲಿ ಕಂಡುಬರುವದು. ಮುಷ್ಟಿಮೈಥುನದ ಚಟವಿದ್ದವರಿಗೆ ನರಗಳ ದೌರ್ಬಲ್ಯವುಂಟಾಗಿ, ಲೈಂಗಿಕ ಭಾವನೆಗಳು ವಿಕೃತ ಭಾವನೆಯನ್ನು ಹೊಂದಿ ಈ ರೋಗವು ಅಂಟಿಕೊಳ್ಳುವದು. ಮುಖ್ಯವಾಗಿ ಅವು ಇಚ್ಛಾಶಕ್ತಿಯ ಅಧೀನವಾಗಿರುವದರಿಂದ ಎಷ್ಟೋ ವರ್ಷಗಳ ವರೆಗೆ ಉಗ್ರಸ್ವರೂಪವನ್ನು ಹೊಂದದೆ ಇರುವವು. ಆದ್ದರಿಂದ ಜನರು ಹೆಚ್ಚಾಗಿ ಇತ್ತ ಗಮನಕೊಡುವದಿಲ್ಲ; ಉಪಹಾಸ ದೃಷ್ಟಿಯಿಂದಲೇ ನೋಡುತ್ತಾರೆ. ಆದರೆ ಸತ್ವಪರೀಕ್ಷೆಯ ಪ್ರಸಂಗಗಳು ಹೆಚ್ಚಾಗಿ ಬಂದು ನಿರಾಶೆಯ ಆಘಾತಕ್ಕೆ ಸಿಕ್ಕುಬಿಟ್ಟರೆ ಮಾತ್ರ ಈ ಬೇನೆಯ ಉನ್ಮಾದದ ಲಕ್ಷಣಗಳು ಒಮ್ಮೆಲೆ ಭ್ರಮದಲ್ಲಿ ಪರ್ಯವಸಾನ ಹೊಂದುವವು. ಇಷ್ಟೇ ಅಲ್ಲ ಈ ಬೇನೆಯು ಬರಬರುತ್ತ ಅನೇಕ ಬೇನೆಗಳನ್ನು ಕೂಡ ಹುಟ್ಟಿಸುವದು. ಉಬ್ಬಸ, ಬೆನ್ನುನೋವು, ಸಂದುಹಿಡಿಯುವಿಕೆ, ಮೂತ್ರಕಟ್ಟುವಿಕೆ ಮುಂತಾದ ಪೀಡೆಗಳು ಆರಂಭವಾಗುತ್ತವೆ. ಇವು ಬೇರೆ ಬೇನೆಗಳೆಂದು ಜನರಲ್ಲಿ ತಿಳುವಳಿಕೆಯದೆ. ಇವು ಬೇರೆ ಬೇನೆಗಳೋ ಅಥವಾ ಉನ್ಮಾದದ ಲಕ್ಷಣಗಳೋ ಎಂಬುದನ್ನು ತಿಳಿದುಕೊಳ್ಳುವದು ಬಹಳ ಕಷ್ಟ. ತಜ್ಞರಾದ ಕೆಲವು ಡಾಕ್ಟರರಿಗೂ ಕೂಡ ತಿಳಿಯದೆ ಹೋಗಿದ್ದರಿಂದ ಇವೆಲ್ಲವುಗಳ ಮೇಲೆ ಶಸ್ತ್ರಚಿಕಿತ್ಸೆ, ಇಂಜೆಕ್ಶನ್ ಮೊದಲಾದ ಉಪಾಯಗಳನ್ನು ಹುಡುಕಿ ತೆಗೆದು ಜನರ ಧನ-ಬಲಗಳನ್ನೆಲ್ಲ ಹೀರಿಬಿಟ್ಟಿದ್ದಾರೆ. ಚೆನ್ನಾಗಿ ವಿಚಾರಿಸಿದರೆ ನರಗಳ ದೌರ್ಬಲ್ಯವೇ ಇದರ ಮೂಲವಾಗಿದೆಯೆಂಬುದು ತಿಳಿಯದೆ ಇರದು. ಉನ್ಮಾದದ ಭ್ರಮೆಯು ನಿಜವಿರುವದೋ ಇಲ್ಲವೋ ಎಂಬುದನ್ನು ಕಂಡು ಹಿಡಿಯುವದು ಬಹಳ ಕಷ್ಟಕರವಾದದ್ದು. ಉನ್ಮಾದದಿಂದ (Hysterical) ಕೆಮ್ಮು ಬಂದು ಧ್ವನಿಯು ಕುಗ್ಗುವದು. ಎದೆಯಲ್ಲಿ ಚುಚ್ಚಿದಂತಾಗುವದು, ತೀವ್ರವಾದ ಶ್ವಾಸೋಛ್ವಾಸಕ್ಕೆ ಆರಂಭವಾಗುವದು. ಗ್ರಂಥಿಗಳು ಉಬ್ಬಿ ಸ್ತನಗಳಲ್ಲಿ ಕೂಡ ಬಾಧೆಯುಂಟಾಗುವದು. ಕರುಳುಗಳಲ್ಲಿ ವಾತವು ಸೇರಿಕೊಳ್ಳುವದು. ಉನ್ಮಾದದಿಂದ ಮೂರ್ಛೆ ಬರತೊಡಗುವದು. ನಾಡಿಗಳು ಜೋರಿನಿಂದ ಹಾರತೊಡಗುವದರಿಂದ ರಕ್ತಾಶಯದ ಬೇನೆಯಾಗಿದೆಯೆಂಬ ಭ್ರಮೆಯುಂಟಾಗುತ್ತದೆ. ಹೊಟ್ಟೆಯ ಎಡಮಗ್ಗ

ಲಲ್ಲಿ ತಾಳಿಕೊಳ್ಳಲಸಾಧ್ಯವಾದಷ್ಟು ನೋವು ಆಗಾಗ್ಗೆ ಏಳತೊಡಗುತ್ತದೆ. ಇದು ಯಾವ ಉಪಾಯಗಳಿಗೂ ಹಣಿಯದಂಥ ಭಯಂಕರ ಶೂಲೆಯು. ಅನೇಕರ ಗರ್ಭಾಶಯ ಹಾಗು ಅಂಡಕೋಶಗಳು ಬಾಯುತ್ತವೆ. ಕೆಲವರಿಗೆ ಯಕೃತದ ವಿಕೃತಿಯ ಜೊತೆಯಲ್ಲಿ ಬಲಹೆಗಲಿನಲ್ಲಿ ನೋವು ಕಾಣಿಸಿಕೊಳ್ಳುತ್ತದೆ. ಕೆಲವರಿಗೆ ವಿಪರೀತ ಹಾಗು ಕೆಲವರಿಗೆ ಬಿಟ್ಟೂಬಿಡದೆ ತಲೆನೋವು ಬರುತ್ತಿರುತ್ತದೆ. ಗೋಣು, ಕೈಕಾಲು ಮೊದಲಾದ ಅಂಗಗಳು ಬಿರುಸಾಗುತ್ತವೆ. ಸಂಧಿವಾತ ಮತ್ತು ಅರ್ಧಾಂಗವಾಯುಗಳು ಕೆಲವರನ್ನು ಪೀಡಿಸುತ್ತವೆ ಒಟ್ಟಾರೆ ಹೇಳುವದೆಂದರೆ ಉನ್ಮಾದ (Hysteria) ದ ಬೇನೆಯ ಕೆಟ್ಟ ಪರಿಣಾಮವು ವಿವಿಧ ಅವಯವಗಳನ್ನು ಪೀಡಿಸುತ್ತದೆ ವಿವಿಧ ಬೇನೆಗಳನ್ನು ಹುಟ್ಟಿಸುತ್ತದೆ-

ಈ ಉನ್ಮಾದವು ಉಗ್ರಸ್ವರೂಪವನ್ನು ತಾಳಿ ಕೆಲವು ರೋಗಿಗಳಿಗೆ ಕುಣಿದಾಡಿಸತೊಡಗುತ್ತದೆ. ರೋಗಿಯು ಹುಚ್ಚನಂತೆ ನಗುವದು, ಚೀರುವದು, ಕೆಲೆಯುವದು ಮಾಡತೊಡಗುವನು ಆಗ ಅವನ ಸಂಬಂಧಿಕರು ಅವನನ್ನು ಕೋಣೆಯಲ್ಲಿ ಬಂಧಿಸಿಡುವದುಂಟು. ಆದರೆ ಇದು ಯೋಗ್ಯ ಉಪಾಯವಲ್ಲ. ಇದರಿಂದ ರೋಗಿಯು ಮತ್ತಿಷ್ಟು ಭ್ರಮಿಷ್ಟನಾಗುವ ಸಂಭವವಿದೆ.

ರಕ್ತಕ್ಷಯವು ಮುಖ್ಯವಾಗಿ ರಕ್ತಕ್ಕೆ ಸಂಬಂಧಿಸಿರುವಂತೆ ಉನ್ಮಾದವು ನರಗಳಿಗೆ ಸಂಬಂಧಪಟ್ಟಿದ್ದಾಗಿದೆ ಒಮ್ಮೊಮ್ಮೆ ಎರಡೂ ಬೇನೆಗಳ ಲಕ್ಷಣಗಳು ಒತ್ತಟ್ಟಿಗೇ ಕಂಡುಬರಬಹುದು. ಜನನೇಂದ್ರಿಯಗಳ ನರಗಳ ಸಂಬಂಧವು ದೇಹದೊಳಗಿನ ರಕ್ತಾಶಯ, ಜಠರಾಶಯ, ಕಶೇರುಕಾರಜ್ಜು (Spinal cord) ಮುಂತಾದ ಇಂದ್ರಿಯಗಳ ನರಗಳೊಡನೆ ನಿಕಟವಾಗಿರುವದರಿಂದ ಈ ಎರಡೂ ಬೇನೆಗಳು ಅಂಟಿಕೊಂಡರೆ ಬಹಳ ತೊಂದರೆಯಾಗುವದು. ಮಾನಸಿಕ ಮತ್ತು ಶಾರೀರಿಕ ಲೈಂಗಿಕ ವಿಕೃತಸ್ಥಿತಿಯು ಈ ಉನ್ಮಾದದ (ಹಿಸ್ಟೀರಿಯಾ) ಮೂಲ ಕಾರಣವಾಗಿರುವದು. ಸರಿಯಾಗಿ ಮುಟ್ಟಾಗುವ ಹುಡುಗಿಯರಲ್ಲಿ, ಅಥವಾ ಮನಸ್ಸಿಗೆ ತಕ್ಕಂತೆ ಮದುವೆಯಾಗಿದ್ದ ಹುಡುಗೆಯರಲ್ಲಿ ಈ ರೋಗವು ಸಹಸಾ ಕಾಣಲಿಕ್ಕಿಲ್ಲ. ಆದರೆ ಕುಮಾರಿಕೆಯರಿಗೆ, ವಿಧವೆಯರಿಗೆ, ಗಂಡಬಿಟ್ಟ ಸಧವೆಯ

ರಿಗೆ, ಬಂಜೆಯರಿಗೆ ಈ ಬೇನೆಯು ಹೆಚ್ಚಾಗಿ ಅಂಟಿಕೊಳ್ಳುವದು. ಏಕೆಂದರೆ ಇವರೆಲ್ಲರೂ ನೈತಿಕ ಹಾಗು ಧಾರ್ಮಿಕ ರೂಢಿಗಳೆಂಬ ಪಿಶಾಚಿಗೆ ಆಹುತಿಯಾಗಿ ಲೈಂಗಿಕ ವಿಕೃತಿಯುಳ್ಳವರಾಗಿರುತ್ತಾರೆ. ಉನ್ಮಾದವು ಮಾನಸಿಕ ರೋಗವಾಗಿರುವಂತೆ ಶಾರೀರಿಕ ರೋಗವೂ ಆಗಿರುವದು. ಆದುದರಿಂದ ಮಾನಸಿಕ ಭಾವನೆಗಳಂತೆ ಶಾರೀರಿಕ ಕ್ರಿಯೆಗಳಾದರೂ ಕೆಟ್ಟು ಹೋಗುತ್ತವೆ.

ಈ ಉನ್ಮಾದ ರೋಗಿಗಳ ಸಂಖ್ಯೆಯು ಹಿಂದುಸ್ತಾನದಲ್ಲಿಯೇ ಕಡಿಮೆಯಾಗಿದೆಯೆನ್ನಬಹುದು. ಬೇರೆ ಯಾವ ಅನರ್ಥಗಳೇ ಸಂಭವಿಸಲಿ, ಹೆಣ್ಣಿನ ಲಗ್ನ ಬೇಗನೆ ಆಗಬೇಕೆಂಬ ಶಾಸ್ತ್ರದ ಕಟ್ಟುಪ್ಪಣೆಯಿರುವದರಿಂದ ನಮ್ಮ ದೇಶದಲ್ಲಿ ಈ ರೋಗವು ಕಡಿಮೆಯಾಗಿದೆ. ಮತ್ತು ಇದು ವಿಶೇಷವಾಗಿ ಉಚ್ಚ ವರ್ಗದವರಲ್ಲಿಯೇ ಹೆಚ್ಚಾಗಿ ಕಾಣುತ್ತದೆ. ಇದಕ್ಕೆ ಕಾರಣವೆಂದರೆ ಉಚ್ಚ ವರ್ಗದವರು ತಮಗೆ ಧನಿಕ ವರನು ಬೇಕೆಂದಾಗಲೀ, ಮನಸ್ಸಿಗೆ ತಕ್ಕ ವರನು ಬೇಕೆಂದಾಗಲೀ ಮದುವೆಯನ್ನು ಹತ್ತಿಕ್ಕಿ ಹಿಡಿಯುತ್ತಾರೆ. ಮೇಲಾಗಿ ನಾಟಕ, ಸಿನೇಮಾ, ಕಾದಂಬರಿ ವಾಚನ ಮೊದಲಾದ ಉದ್ರೇಕಕ್ಕೆ ಪೋಷಕವಾದ ಶಿಕ್ಷಣ ಬೇರೆ ಅವರಿಗೆ ಸಿಗುತ್ತಿರುತ್ತದೆ. ಹೀಗಾಗಿ ಆ ಕುಮಾರಿಕೆಯರು ತಡೆದು ತಡೆದು ಕೊನೆಗೆ ಅಡ್ಡದಾರೀ ಹಿಡಿಯುತ್ತಾರೆ. ಉನ್ಮಾದದಂಥ ರೋಗಗಳಿಗೆ ಬಲಿಯಾಗುತ್ತಾರೆ.

ಈ ಎಲ್ಲ ಭಯಂಕರ ಪರಿಸ್ಥಿತಿಗಳ ಅವಲೋಕನೆಯನ್ನು ಮಾಡಿ ಪ್ರತಿಯೊಬ್ಬರೂ ಇನ್ನು ಮುಂದಾದರೂ ಮೂಢ, ರೂಢ ಕಲ್ಪನೆಗಳಿಗೆ ಬೆಲೆ ಕೊಡದೆ ನಿಸರ್ಗಕ್ಕೆ ಅನುಕೂಲವಾದ ಆಚರಣೆಯನ್ನು ಮಾಡಬೇಕು. ಸಮಾಜ ರಚನೆಯಲ್ಲಿ ಒಮ್ಮೆಲೆ ಬದಲಾವಣೆ ಮಾಡಬೇಕು. ಸ್ವಾಭಾವಿಕ ಭಾವನೆಗಳನ್ನು ಹತ್ತಿಕ್ಕುವ ಪ್ರಯತ್ನ ಮಾಡುವದಕ್ಕಿಂತಲೂ ಅವಕ್ಕೆ ಅನುಕೂಲವಾದ ವಾತಾವರಣವನ್ನು ಕಲ್ಪಿಸಿಕೊಡಬೇಕು. ಇಲ್ಲವಾದರೆ ಜ್ವಾಲಾಮುಖಿಯ ಜ್ವಾಲೆಯಂತಿರುವ ತರುಣ-ತರುಣಿಯರ ಬಯಕೆಗಳು ಒಮ್ಮೆಲೆ ಹೊರನುಗ್ಗುವವು. ಬಲ್ಲವರು ಪಾಪ-ಪುಣ್ಯಗಳ ನಿಜಗುಟ್ಟನ್ನರಿತು ತರುಣ-ತರುಣಿಯರ ತಾಪವನ್ನು ಅವರಲ್ಲಿ ವ್ಯಾಪಿಸಿದ ರೋಗಗಳನ್ನು, ಕಂಡು ಹಿಡಿದು ಸುಗಮವಾದ ದಾರಿಯನ್ನು ಕಲ್ಪಿಸಿಕೊಡಬೇಕು. ಬಾಹ್ಯ ಉಪ

ಚಾರಗಳಿಂದ ಉನ್ಮಾದ ವ್ಯಾಧಿಯು ಎಂದಿಗೂ ಕಡಿಮೆಯಾಗಲಾರದು. ಜನನೇಂದ್ರಿಯಗಳ ನರಗಳಿಗೆ ತಕ್ಕ ಉತ್ತೇಜನ-ವ್ಯಾಯಾಮ ಸಿಕ್ಕು ಅವು ಗಳು ತೃಪ್ತವಾಗಿದ್ದರೇನೇ ನಿಜವಾದ ಸೌಖ್ಯ-ಸಮಾಧಾನಗಳು ನೆಲೆಗೊಳ್ಳುವವು. ಅದೇ ಆರೋಗ್ಯದ ಗುಟ್ಟು! ಉನ್ಮಾದಕ್ಕೆ ಸರಿಯಾದ ಮದ್ದು! ಬಾಹೋಪಚಾರಗಳಿಂದ ಪ್ರಕೃತಿಯನ್ನು ಮೋಸಗೊಳಿಸುವದು ಸಾಧ್ಯವೇ ಇಲ್ಲ. ಉನ್ಮಾದದ ಬೇನೆಯು ದೆವ್ವದ ಬೇನೆಯೆಂದು ತಿಳಿದು ಹೊಡೆಯುವದು, ಬೈಯುವದು, ಕಟ್ಟಿಹಾಕುವದು, ಜಬರಿಸುವದು ಮೊದಲಾದ ಕ್ರೂರ ಪದ್ಧತಿಗಳನ್ನು ಅನುಸರಿಸುವದು ತೀರ ಕೆಟ್ಟದ್ದು. ಅಪಾಯಕರವು. ಅಶಾಸ್ತ್ರೀಯವು. ಇದರಿಂದ ನಿರ್ಬಲ ಮನಸ್ಸಿನವರಿಗೆ ಕೂಡಲೆ ಹುಚ್ಚು ಹಿಡಿಯುವದು.

ಉನ್ಮಾದವು ಶಾರೀರಿಕ ರೋಗದಂತೆ ಮಾನಸಿಕ ರೋಗವಾದರೂ ಆಗಿದೆಯೆಂಬುದನ್ನು ಮೊದಲೇ ಹೇಳಿದ್ದೇವೆ. ತನುಮನಗಳೆರಡರಲ್ಲೂ ಆರೋಗ್ಯವನ್ನುಂಟುಮಾಡುವದೆಂದರೆ ವ್ಯಕ್ತಿಯನ್ನು ಸುಖಿ ಮತ್ತು ತೃಪ್ತಳನ್ನಾಗಿ ಮಾಡುವದು. ತರುಣಿಯು ಅಪೇಕ್ಷಿಸುವ ವರನನ್ನೇ ಆರಿಸಬೇಕೇ ಹೊರತು ಅವಳ ಇಚ್ಛೆಯ ವಿರುದ್ಧ ಯಾವದೇ ಕಾರಣದಿಂದ ಧನಿಕನನ್ನಾಗಲೀ, ಕುಬೇರನನ್ನಾಗಲೀ ಆರಿಸಕೂಡದು. ಇದೇ ಯೋಗ್ಯ ಹಾಗು ಸತ್ಯ ಮಾರ್ಗ! ಅವಳು ಬಯಸುವ ತರುಣನಿಂದಲೇ ಅವಳಿಗೆ ಶಾರೀರಿಕ ಮತ್ತು ಮಾನಸಿಕ ಸಮಾಧಾನವು ಲಭಿಸುವದು.

ಈ ಮುಖ್ಯವಾದ ಉಪಾಯದೊಂದಿಗೆ ಬೇರೆ ಕೆಲವು ಉಪಾಯಗಳೂ ಉಂಟು. ಸ್ಥಲಾಂತರ, ಪ್ರವಾಸ, ಬೈಲು ಹವೆಯಲ್ಲಿ ಸ್ವೇಚ್ಛೆಯಿಂದ ತಿರುಗಾಡುವದು ಇವೇ ಮುಖ್ಯವಾದವುಗಳು. ಸ್ತ್ರೀಯರಿಗೆ ಮನೆ ಬಿಟ್ಟು ಹೊರಗೆ ಹೋಗಲಿಕ್ಕೆ ಸಹ ಸ್ವಾತಂತ್ರ್ಯವಿಲ್ಲದೆ ಇರುವದರಿಂದ ಈ ರೋಗವು ಬೆಳೆಯಲಿಕ್ಕೆ ಹೆಚ್ಚಿನ ಕಾರಣವಾಗಿದೆ. ಸ್ತ್ರೀಯರ ಪ್ರತಿಯೊಂದು ಕಾರ್ಯಗಳ ಮೇಲೂ ಸಂದೇಹ ದೃಷ್ಟಿಯಿಂದ ನಿಗಾ ಇಡುವದು ತನ್ನ ಕೆಲಸವೆಂದು ಗಂಡಸರು ಭಾವಿಸಿದ್ದರಿಂದ ಅವರಿಗೆ ಯಾವ ಸಾಹಸದ ಕೆಲಸಗಳನ್ನಾಗಲೀ, ದೇಶಹಿತ, ಸಮಾಜಹಿತದ ಕೆಲಸಗಳನ್ನಾಗಲೀ ಮಾಡಲಿಕ್ಕೆ ಆಸ್ಪದವಿಲ್ಲದಾಗಿದೆ. ನಾಲ್ಕು ಗೋಡೆಗಳ ನಡುವೆ ಸಿಕ್ಕಿ

ಬಿದ್ದು, ಊಟ-ಉಡಿಗೆ, ಧರ್ಮ-ಕರ್ಮ, ಪೊಳ್ಳು ವೇದಾಂತ, ಮನೆಯ ಜನರ ಚಾಕರಿ ಇವಕ್ಕಿಷ್ಟೇ ತಾನು ಮೀಸಲಾಗಿರುವೆನೆಂಬ ಭಾವನೆ ಅಳಿಯುವವರೆಗೆ ಸ್ತ್ರೀಯರಿಗೆ ಸುಖವಿಲ್ಲ. ಪುರುಷರಂತೆ ಅವಳಿಗೂ ಆತ್ಮವಿದೆ, ಭಾವನೆಗಳಿವೆ, ಅವಳಲ್ಲಿಯೂ ಕರ್ತೃತ್ವಶಕ್ತಿ ಇದೆ ಎಂಬುದನ್ನು ಮರೆಯಲಾಗದು.

ಉನ್ಮಾದಿತ ಸ್ತ್ರೀಯು ಯಾವುದಾದರೊಂದು ಮನೆಯಲ್ಲಿದ್ದರೆ ಅವಳನ್ನು ತಿರಸ್ಕಾರ ದೃಷ್ಟಿಯಿಂದ ನೋಡಬಾರದು. ಅವಳನ್ನು ಪ್ರೀತಿಯಿಂದ ಹಾಗು ಕನಿಕರದಿಂದ ನಡೆಸಿಕೊಳ್ಳಬೇಕು. ಅವಳಲ್ಲಿ ಆತ್ಮವಿಶ್ವಾಸವನ್ನು ಹುಟ್ಟಿಸಲು ಯತ್ನಿಸಬೇಕು. ಉನ್ಮಾದವು ಸುಳ್ಳು ಬೇನೆಯೆಂದು ಎಂದಿಗೂ ತಿಳಿಯಕೂಡದು. ಉನ್ಮಾದಿತಳು ತನಗಿದ್ದ ಮಾನಸಿಕ ಅಸ್ವಸ್ಥತೆಯ ನಿಜವಾದ ಕಾರಣವನ್ನು ಲಜ್ಜೆಯಿಂದ ಹೇಳಲಿಕ್ಕಿಲ್ಲ. ಲೈಂಗಿಕ ಬೇನೆಗಳನ್ನು ಗೌಪ್ಯವಾಗಿಡಲು ಯತ್ನಿಸುವದಕ್ಕಾಗಿ ಬೇನೆಯ ನೆವವನ್ನು ಬೇರೆ ಏನಾದರೂ ಹೇಳುವ ಸಂಭವವಿರುತ್ತದೆ. ಸಮಾಜವು ಏನೆನ್ನುವದೋ ಎಂದು ಹೆದರಿ ಮುಚ್ಚಿಡಲು ತರುಣ ತರುಣಿಯರು ಪ್ರಯತ್ನ ಪಡುತ್ತಾರೆ. ಅಂತರಂಗದಲ್ಲಿಡತಕ್ಕ ಸಂಗತಿಯೆಂದು ತಿಳಿದುಕೊಳ್ಳುತ್ತಾರೆ. ಈ ವಿಷಯದಲ್ಲಿ ಅಂತರಂಗ, ಬಹಿರಂಗಗಳು ಒಂದಾಗುವಂತ ನೋಡಿಕೊಳ್ಳುವದು ನೀತಿಶಾಸ್ತ್ರಜ್ಞರ ಹಾಗು ಭಿಷಗ್ವರ್ಯರ ಕರ್ತವ್ಯವಾಗಿದೆ. ಅದಕ್ಕಾಗಿಯೇ 'ಸಮಾಜದ ಬೇನೆಗಳು ಬಿಚ್ಚುಮಾತಿನಿಂದ ಹೇಳಿದಲ್ಲದೆ ನೆಟ್ಟಗಾಗುವದಿಲ್ಲ' ವೆಂದು ಜಾನ್ ಸ್ಟುಅರ್ಟಮಿಲ್ಲರು ನುಡಿದಿದ್ದಾರೆ.

ಲೈಂಗಿಕ ಬೇನೆಗಳನ್ನು ಹೋಗಲಾಡಿಸಲು ಉಪಾಯವೆಂದರೆ ಅವುಗಳ ವಾಸನೆಯನ್ನು ತೃಪ್ತಿಪಡಿಸಲು ಸೌಕರ್ಯವನ್ನು ಮಾಡಿಕೊಡುವದು ಎಂಬುದಾಗಿ ಮೊದಲೇ ತಿಳಿಸಿದ್ದೇವೆ. ಬಾವು, ನೋವುಗಳೇನಾದರೂ ಇದ್ದರೆ ಮಾತ್ರ ಡಾಕ್ಟರ ಜನರ ಮೇಲುಪಚಾರದ ಅವಶ್ಯಕತೆಯಿದೆ. ಸಂಭೋಗ ಸೌಖ್ಯವಿಷ್ಟೇ ಅಲ್ಲ- ತಮ್ಮಿಂದ ಹುಟ್ಟಬಹುದಾದ ಸಂತಾನದಿಂದ ಕೂಡ ಸ್ತ್ರೀಯರಿಗೆ ಸೌಖ್ಯವುಂಟಾಗುತ್ತದೆ. ಸ್ವಾಭಾವಿಕವಾಗಿ ಹುಟ್ಟಿದ ಮಕ್ಕಳ ಜನನದಿಂದ ತಾಯಿಗೆ ಒಂದು ಬಗೆಯ ಆರೋಗ್ಯಕರವಾಹ ಚೈತ

ನ್ಯವುಂಟಾಗುತ್ತದೆ. ತನುಮನದ ವಿಕೃತ- ಸ್ಥಿತಿಗಳು ದೂರಾಗಿ ಹೊಸ ಹುರುಪು ಹಾಗು ಶಕ್ತಿ ಬರುತ್ತದೆಂಬುದು ಎಲ್ಲರಿಗೂ ಕಾಣುವ ಮಾತಾಗಿದೆ.

ಮುಖ್ಯವಾಗಿ ಹೆಂಗಸಿನ ತಾಪತ್ರಯಗಳು ಅವಳು ಪ್ರಾಯಕ್ಕೆ ಬಂದು ಸುಸೂತ್ರವಾಗಿ ಲಗ್ನವಾಗುವವರೆಗೂ ಉಳಿಯುವವು. ಅಲ್ಲಿಯ ವರೆಗೆ ಅವಳ ಅತೃಪ್ತ ಬಯಕೆಗಳು ಅವಳ ಮನಸ್ಸನ್ನು ವ್ಯಾಕುಲಗೊಳಿಸುವವು. ಅಸಂಖ್ಯವಾದ ಮೋಹಗಳು ಮತ್ತು ಉದ್ರೇಕಗಳು ಅವಳಲ್ಲಿ ಮನೆಮಾಡುವವು. ಅವಳು ಕುಮಾರಿ ಇರಲಿ, ವಿಧವೆಯಿರಲಿ, ಪರಿತ್ಯಕ್ತಳಾದ ಸಧವೆಯಿರಲಿ, ಅವಳು ಯೋಚಿಸುವದು ಒಂದೇ ಒಂದು "ತನ್ನ ಕಾಮವಾಸನೆಯ ತೃಪ್ತಿಯು ಹೇಗಾದೀತು?" ಇವೇ ಆಶೆ-ಆಕಾಂಕ್ಷೆಗಳೆಂಬ ಕಾರ್ಮೋಡಗಳಿಂದ ಅವಳ ಜೀವಿತದ ಆಕಾಶವು ಕಗ್ಗತ್ತಲಾಗುತ್ತದೆ. ಈ ಎಲ್ಲ ಸಂಗತಿಗಳು ಹದಿನಾರಾಣೆ ಸತ್ಯವೆಂದು ತಿಳಿದ ಮೇಲಾದರೂ ನಮ್ಮ ಹಿಂದಿನ ಮೂಢ ಕಲ್ಪನೆ, ಪೊಳ್ಳು ವೇದಾಂತಗಳನ್ನು ಬಿಟ್ಟು ಬಿಡುವದು ನಮ್ಮ ಧರ್ಮವಲ್ಲವೆ? ಕರ್ತವ್ಯಕರ್ಮವಲ್ಲವೆ? ನೈಸರ್ಗಿಕ ಹಾಗು ಸತ್ಯದ ತಳಹದಿಯಮ್ಮೇಲೆ ನಿಲ್ಲುವಂಥ ಹೊಸದೊಂದು ಸಿದ್ಧಾಂತವನ್ನು ನಿರ್ಮಿಸುವದು ನಮ್ಮ ಪವಿತ್ರವಾದ ಕೆಲಸವಲ್ಲವೇ? ಈ ಹೊಸ ಸಿದ್ಧಾಂತಗಳನ್ನು ಮುಂಡಿಸುವ ಮೊದಲು ನಮಗೆ ಅನೇಕ ಅಡ್ಡಿ ಅಡಚಣೆಗಳು ಬರಬಹುದು. ಎಡೆರು-ತೊಡರಗಳು ಬರಬಹುದು. ಅವೆಲ್ಲವುಗಳಿಗೂ ಎದೆಗೊಡುವದು ನಮ್ಮ ಪವಿತ್ರವಾದ ಕರ್ತವ್ಯವಾಗಿದೆ. ಕಷ್ಟಪಡದ ಹೊರತು ಸುಖಿಸಿಗುವದಿಲ್ಲವೆಂಬುದನ್ನು ನಾವು ಸ್ಪಷ್ಟವಾಗಿ ತಿಳಿದುಕೊಂಡಿರಬೇಕು.

ಒತ್ತಾಯದ ಸಂಯಮನದಿಂದಾಗುವಷ್ಟೇ ಮಿತಿಮೀರಿದ ಸಂಭೋಗದಿಂದಾದರೂ ಕೆಟ್ಟ ಪರಿಣಾಮವಾಗುತ್ತಂದೆಬ ಮಾತನ್ನಾದರೂ ಪ್ರತಿಯೊಬ್ಬರೂ ಅವಶ್ಯವಾಗಿ ನೆನಪಿನಲ್ಲಿಡತಕ್ಕ ಸಂಗತಿಯಾಗಿದೆ. ಸಂಭೋಗವು ಲೈಂಗಿಕ ಬೇನೆಗಳನ್ನು ನಿವಾರಿಸುವ ಸಾಧನವೆಂದು ಭಾವಿಸಿ ಮಿತಿಮೀರಿದ ಸಂಭೋಗವನ್ನು ಯಾರೂ ಬಯಸಬಾರದು. ಅಶಕ್ತ ಹೆಂಡತಿಯು ಸಶಕ್ತಗಂಡನೊಡನೆ ಬಾಳುವೆ ಮಾಡುವ ಪ್ರಸಂಗಬಂದಾಗ ಆದಷ್ಟು ಮಿತ ಸಂಭೋಗದ ಕ್ರಮವನ್ನಿಡಬೇಕು. ಯಾಕಂದರೆ ಕಾಮಾತಿರೇಕದಿಂದ

ಅನೇಕ ದುಷ್ಪರಿಣಾಮಗಳುಂಟಾಗುವವು. ರಕ್ತಕ್ಷಯ, ಉನ್ಮಾದ, ಆರ್ತ ದೋಷಗಳಂಥ ರೋಗಗಳು ಅಂಟಿಕೊಳ್ಳುವವು. ಮಿತಸಂಭೋಗದಿಂದಲೇ ತನು-ಮನಗಳ ವಿಕಾಸವಾಗುವದು. ತ್ಯಾಗ ಹಾಗು ಸಂಯಮನಗಳು ಸದ್ಗುಣಗಳೇನೋ ನಿಜ, ಆದರೂ ಲೈಂಗಿಕ ವಿಷಯದಲ್ಲಿ ಅದರ ಅತಿರೇಕವು ದುರ್ಗುಣದಲ್ಲಿ ಪರಿಣಮಿಸುವದು. ಕಾಮವಿಕಾರಗಳನ್ನು ಹತ್ತಿಕ್ಕಿದ ಮಾತ್ರಕ್ಕೆ ಅವುಗಳನ್ನು ಜಯಿಸಿದಂತಾಗುವದಿಲ್ಲ. ಹೆಚ್ಚು ಹೆಚ್ಚು ನಾವು ಅವುಗಳ ದಾಸರಾಗುತ್ತೇವೆ. ಅವು ನಮ್ಮನ್ನು ತುಂಬಾ ಕಾಡುತ್ತವೆ. ಪ್ರೇಮ ಭಾವಗಳನ್ನು ಹತ್ತಿಕ್ಕಿದವರು, ವೀರ್ಯ ದೋಷದಿಂದ ಬಳಲುವವರು, ಉನ್ಮಾದಿನಿಯರು, ತಾವು ಸಂಯಮಿಗಳೆಂದು ಜಂಭ ಕೊಚ್ಚಿಕೊಳ್ಳುವವರು ಕಾಮುಕ ವಿಚಾರಗಳಲ್ಲಿ ಆಸಕ್ತರಾದಷ್ಟು ಬೇರೆ ಯಾರೂ ಆಗಿರುವದಿಲ್ಲವೆಂಬುದನ್ನು ಮರೆಯಲಾಗದು. ವಿವಾಹಿತರಿಗಿಂತ ಅವಿವಾಹಿತರಿಗೆ, ವಿಧವೆಯರಿಗೆ, ಪರಿತ್ಯಕ್ತರಿಗೆ ಪ್ರೇಮವು ಆಯುಷ್ಯದ ಸಾರಸರ್ವಸ್ವವಾಗಿರುತ್ತದೆ. ಇದು ಪ್ರಕೃತಿ ಧರ್ಮವನ್ನು ಗೆದ್ದು ಬಿಡುವೆವೆಂಬ ಹೆಮ್ಮೆಯನ್ನು ತಾಳುವವರ ಮೂರ್ಖತನದ ಪ್ರದರ್ಶನವಾಗಿದೆ. ಒಟ್ಟಿನ ಮೇಲೆ ಹೇಳುವದಾದರೆ, ಸದಾಕಾಲ ಕಾಮದಹನ ಭ್ರಾಂತಿಯೂ ಅಂಟಿಕೊಂಡಿರಬಾರದು, ಅಸ್ವಾಭಾವಿಕ ಸಂಯಮನದ ಪೊಳ್ಳುವಿಚಾರವೂ ಅಂಟಿಕೊಂಡಿರಬಾರದು. ಎಲ್ಲದಕ್ಕೂ ಮಿತಿ ಇರಬೇಕು. ಇದರಲ್ಲಿಯೇ ಹಿತವಿದೆ.



# ವೇಶ್ಯಾವೃತ್ತಿಯ ಹಾವಳಿ!



ವೇಶ್ಯಾವೃತ್ತಿಯೆಂದರೇನು? ವ್ಯಕ್ತಿಗಳಲ್ಲಿ ಭೇದಭಾವವನ್ನೆಣಿಸದೆ ದುಡ್ಡಿಗೆ ಪ್ರೀತಿಯನ್ನು ಮಾರಿಕೊಂಡು ಪ್ರಕಟವಾಗಿ ವ್ಯಭಿಚರಿಸುವವಳು ವೇಶ್ಯೆ, ಅವಳ ವೃತ್ತಿಯು ವೇಶ್ಯಾವೃತ್ತಿಯೆಂದು ಕಾಯದೆಯು ಇದರ ಅರ್ಥವನ್ನು ಸ್ಪಷ್ಟೀಕರಿಸಿದೆ; ಯಾವಳೊಬ್ಬಳು ಕೆಲ ಪ್ರಿಯಕರರೊಡನೆ ಗುಪ್ತವಾಗಿ ನಡೆಸುವ ಭೋಗವ್ಯವಹಾರವು--ಅದಕ್ಕಾಗಿ ಅವಳು ದುಡ್ಡು ತೆಗೆದುಕೊಂಡರೂ--- ವೇಶ್ಯಾವೃತ್ತಿಯಲ್ಲ. ಈ ವೇಶ್ಯಾವೃತ್ತಿಯನ್ನು ಕೈಕೊಂಡ ಹೆಂಗಸರು ಬಹುಶಃ ಕೂಲಿಕಾರ ವರ್ಗದವರೋ ಸಣ್ಣಪುಟ್ಟ ವ್ಯಾಪಾರೀ ವರ್ಗದವರೋ ಇರುವರು; ಬಡತನದ ದೆಸೆಯಿಂದ ಈ ವ್ಯವಸಾಯವನ್ನು ಕೈಕೊಂಡವರಿರುವರ. ಉಚ್ಚವರ್ಗದವರು ಹೆಚ್ಚಾಗಿ ಇದಕ್ಕೆ ಸೇರಿಲ್ಲ. ವೇಶ್ಯೆಯರಲ್ಲಿ ಎರಡು ಬಗೆಗಳಿವೆ. ಅನ್ಯರೊಬ್ಬರ ನೇತೃತ್ವದಲ್ಲಿ ವೇತನ ತೆಗೆದುಕೊಂಡು ವೇಶ್ಯಾಗೃಹಕ್ಕೆ ಸೇರಿದವರದೊಂದು ಗುಂಪು, ಸ್ವತಂತ್ರ ವೇಶ್ಯೆಯರದೊಂದು ಗುಂಪು. ಸಮಾಜ ಸ್ವಾಸ್ಥ್ಯದ ದೃಷ್ಟಿಯಿಂದ ಪರತಂತ್ರ ವೇಶ್ಯೆಯರೇ ಹೆಚ್ಚು ಕ್ಷೇಮಕಾರಿಗಳೆಂದು ಹೇಳಬಹುದು. ಏಕೆಂದರೆ ಅವರ ಮೇಲೆ ನಿಯಂತ್ರಣವಿಟ್ಟು ಆರೋಗ್ಯವನ್ನು ಕಾಪಾಡಿಕೊಳ್ಳುವ ವ್ಯವಸ್ಥೆ ಮಾಡುವದು ಸಾಧ್ಯವಿದೆ; ಸಾಂಸರ್ಗಿಕ ರೋಗಗಳನ್ನು ತಡೆಯುವದು ಸುಲಭವಿದೆ. ಆದರೆ ವೇಶ್ಯಾಗೃಹದ ಚಾಲಕರು ಸ್ವಾರ್ಥಿಗಳೂ ದುಷ್ಟರೂ ಇದ್ದರೆ ಸ್ವಲಾಭಕ್ಕಾಗಿ ಗುಲಾಮರಾದ ವೇಶ್ಯೆಯರಿಗೆ ಹೆಚ್ಚು ತೊಂದರೆ ಕೊಡುವರು; ಮುಂದೆ ಕೆಲಸಕ್ಕೆ ಬಾರದ

ಸಜೀವ ಗೊಂಬೆಗಳಾದರೆಂದರೆ ಅವರನ್ನು ಅಸಿಮಿಸಿಯಿಲ್ಲದೆ ತಳ್ಳಿಬಿಡು ವರು. ಇದರಿಂದ ಆ ವೇಶ್ಯೆಯರ ನಿವೃತ್ತಿ ಜೀವನವು ಅಸಹ್ಯವಾಗುವದು. ಹೀಗೆ ಮಾಡುವದು ಕಾನೂನಿಗೆ ವಿರುದ್ಧವಾದದ್ದು; ಆದರೇನು ಈ ಅಶಿಕ್ಷಿತೆ ನಿರ್ಭಾಗ್ಯ ಮಹಿಳೆಯರಿಗೆ ಆ ಕಾನೂನು ನಿಷ್ಪ್ರಯೋಜಕವೇ ಆಗಿರುವದು.

ಈ ವೇಶ್ಯಾಗೃಹಗಳಿಗೆ ಹಳ್ಳಿಪಳ್ಳಿಗಳಿಂದ ಹರೆಯದ ಚೆಲುವೆಯ ರನ್ನು ಯುಕ್ತಿಪ್ರಯುಕ್ತಿಗಳಿಂದ ಹಿಡಿತಂದು ಹಾಕುವ ಏಜಂಟರಿರುವರು. ಅತ್ತೆಮನೆಯಲ್ಲಿಯ ಕಾಟಗಳಿಂದ, ಮನೆ ಜಗಳಗಳಿಂದ, ಬಡತನದಿಂದ ಅಸಮಾಧಾನ ಹೊಂದಿ ವಿಕಾರವಶರಾಗಿ ಮನೆಬಿಟ್ಟಂಥ ನಿರಾಶ್ರಯರಾದ ಹೆಣ್ಣುಮಕ್ಕಳ ಬೇಟೆಯಾಡಲು ಈ ಏಜಂಟರು ಹೊಂಚುಹಾಕುತ್ತಿರುವರು. ಹೊಟ್ಟೆಗೂ ಗತಿಯಿಲ್ಲದ ಬಡ ತಂದೆತಾಯಿಗಳು, ವಿಶೇಷವಾಗಿ ಗಂಡಸತ್ತ ತಾಯಂದಿರು ತಮ್ಮ ಹೆಣ್ಣುಮಕ್ಕಳನ್ನು— ಕೊಂಡುಕೊಳ್ಳುವವರ ಉದ್ದೇಶ ವನ್ನು ತಿಳಿಯದೆ, ಮೋಸಹೋಗಿ— ಮಾರಿಕೊಳ್ಳುವದೂ ಉಂಟು. ಹೀಗೆ ವೇಶ್ಯಾ ಗೃಹಗಳ ಸಂಚಾಲಕರ ಬಲೆಗೆ ಬಿದ್ದು ವೇಶ್ಯಾವೃತ್ತಿಗಿಳಿದವರು, ಮುಂದೆ ಸ್ವಜಾತಿಯ ಗರತಿಯರಾದ ಹೆಣ್ಣುಮಕ್ಕಳನ್ನು ಸಹ ತಮ್ಮೊಳಗೆ ಸೆಳೆದುಕೊಂಡು ಪ್ರಪಂಚವನ್ನು ದುಃಖಮಯವಾಗಿ ಮಾಡಿಬಿಡುವರು. ಕೆಲವು ಹೆಣ್ಣುಮಕ್ಕಳು— ಸುಶಿಕ್ಷಿತರು ಕೂಡ— ತಮ್ಮ ಪ್ರಿಯಕರರ ಸವಿ ಮಾತಿನ ಪ್ರಲೋಭನಗಳಿಗೆ ಮರುಳಾಗಿ, ಮದುವೆಯ ಆಸೆಯಿಂದ ಅವರ ಬೆನ್ನುಹತ್ತಿ ದೇಶಾಂತರಕ್ಕೆ ಹೋಗಿ, ಅಲ್ಲಿ ಕಾರಣಾಂತರಗಳಿಂದ ಪ್ರಿಯ ಕರರಿಂದ ತ್ಯಕ್ತರಾಗಿ ಗತಿಗಾಣದೆ ವೇಶ್ಯಾಗೃಹಕ್ಕೆ ಶರಣು ಹೊಕ್ಕ ವರುಂಟು.

ಇನ್ನುಳಿದ ಕೀಳು ತರಗತಿಯ ವೇಶ್ಯೆಯರಿಗೆ ನರಕಕುಂಡದೊಳಗಿನ ಕ್ರಿಮಿಗಳೆಂದರೂ ಸಂದೀತು. ಅವರು ಹೀಗಾಗಲಿಕ್ಕೆ ಸಮಾಜವು ಅವರ ಬಗ್ಗೆ ತಳೆದ ತಿರಸ್ಕಾರದೃಷ್ಟಿ, ಬಹಿಷ್ಕಾರದ ವರ್ತನೆಯೇ ಕಾರಣ. ನಾರುಕ ಮನೆಗಳಲ್ಲಿಯೋ ಕಾಲು ಚಾಚುವಷ್ಟು ಮಾತ್ರ ಸಣ್ಣದಾದ ಮನೆ ಗಳಲ್ಲಿಯೋ ವಾಸಿಸಿದ್ದು, ವೇಶ್ಯಾವ್ಯವಸಾಯವನ್ನು ಸಾಗಿಸುತ್ತಿರುವರು.

ಇವರಲ್ಲಿ ಬಹುಮಂದಿ ನೋಡಿದರೆ ಹೇಸಿಕೆಯಾಗುವಂಥ ವಿಕೃತ ಸ್ವರೂಪಿ ಗಳಾಗಿರುವರು; ತಮ್ಮೀ ಸೌಂದರ್ಯವನ್ನು ಮುಚ್ಚಿಡಲು ಕತ್ತಲೆಯ ಲ್ಲಿಯೋ ಹಾಳುಗೋಡೆಯಲ್ಲಿಯೋ ಮುಖವನ್ನು ಮರೆಯಿಸುತ್ತಿರುವರು. ಇವರು ಅನೈಸರ್ಗಿಕವಾದ ಉಪಾಯಗಳಿಂದ ತಮ್ಮ ಕಾಮ ವಿಕಾರಗ ಳನ್ನು ಕೆರಳಿಸಿಕೊಳ್ಳುವರು, ಮತ್ತು ಅದನ್ನು ತೃಪ್ತಿಗೊಳಿಸಲು ಯತ್ನಿ ಸುವರು. ಎಲ್ಲ ತರಹದ ಸ್ವೇಚ್ಛಾಚಾರದ ಕಾಯಕಗಳ ಮೂರ್ತಿಗಳಿವ ರೆಂದರೂ ತಪ್ಪಲ್ಲ. ಇವರ ಸ್ವಭಾವಗಳು ತೀರ ವಿಕಾರ ಹೊಂದಿರುವವು. ಭಯವೂ, ವೈರಭಾವವೂ ಸ್ತ್ರೀಸಹಜವಾದ ದಯಾ ಪ್ರೀತಿಗಳನ್ನು ಇವರ ಅಂತಃಕರಣದಿಂದ ತಳ್ಳಿ ತಾವು ಅಲ್ಲಿ ಮನೆಮಾಡಿರುವವು. ನಿಜವಾಗಿಯೂ ಇವರು ಜೀವಿತದ ವಿಷಯದಲ್ಲಿ ನಿರಾಶರಾಗಿರುವರು. ಆದರೆ ಆ ನಿರಾಶೆ ಯೊಡನೆ ಹೋರಾಡಿ ಬದುಕಲು ಅವರಿಗೊಂದು ಶಕ್ತಿಯಿರುವದು. ಅದೇ ನೆಂದರೆ, ತಮ್ಮನ್ನು ತಿರಸ್ಕಾರ ಬಹಿಷ್ಕಾರಗಳಿಂದ ಬಳಲಿಸುವ ಸಮಾಜದ ಬಗ್ಗೆ ಉಂಟಾದ ದ್ವೇಷ ಮತ್ತು ಅದರ ಸೇಡು ತೀರಿಸಿಕೊಳ್ಳಬೇಕೆಂಬ ಪ್ರವೃತ್ತಿ ! ಸಮಾಜವು ಇವರನ್ನು ತಿರಸ್ಕರಿಸಿದ್ದೀತು ಮಾತ್ರ, ಆದರೆ ಇದಕ್ಕೆ ಕಾರಣವಾದ ಸಮಾಜದ ನೀತಿಯನ್ನೇ ಬುಡಮೇಲು ಮಾಡು ವಷ್ಟು, ಅದಕ್ಕೆ ಕಲಂಕವನ್ನು ಹಚ್ಚಬಲ್ಲಷ್ಟು ಇವರೀ ದ್ವೇಷಪ್ರವೃತ್ತಿಯು ಪ್ರಬಲವಾಗಿರುವದು !

ಕಾಮವಿಕಾರದ ವಿಕೃತ ಸ್ವರೂಪಗಳಾವವು ? ಅವುಗಳನ್ನು ತಣಿ ಸಲು ಸಮಾಜದಲ್ಲಿ ವಿಶೇಷವಾಗಿ ದೊಡ್ಡ ದೊಡ್ಡ ಪಟ್ಟಣಗಳಲ್ಲಿ ಅನು ಸರಿಸಲ್ಪಡುವ ಹೇಯ ಮಾರ್ಗಗಳಾವವು ? ಇವನ್ನು ಚರ್ಚಿಸುವದು ಅತ್ಯಂತ ಹೇಯವಾದದ್ದೆಂದು ಜನರ ತಿಳವಳಿಕೆಯಾಗಿದೆ. ಆದರೆ ನಿಜ ವಾಗಿಯೂ ಮಾನವ ಕಲ್ಯಾಣವನ್ನು ಅಪೇಕ್ಷಿಸುವವನು ಇದನ್ನು ಚರ್ಚಿ ಸದೆ, ವಿಚಾರ ಮಾಡದೆ ಬಿಡಲಾರನು; ನೀತಿಯ ಚಾಟಿಗೆ ಅಂಜಲಾ ರನು. ಇಂಥ ವಿಷಯಗಳ ಚರ್ಚೆಗೆ ತಡೆಯನ್ನು ಉಂಟುಮಾಡಿದ್ದೆ ವಿಶೇಷತಃ ಹೆಣ್ಣು ಮಕ್ಕಳಿಗೆ ಆಜ್ಞಾನ ಮಾಡಿಕೊಳ್ಳಲು ಪ್ರತಿಬಂಧಿಸಿದ್ದೆ ಇಂದಿನ ಅವರ ದುಃಖಕ್ಕೆ ಕಾರಣವಾಗಿದೆ.

ಸಮಲಿಂಗೀ ಮೈಥುನವು ಅತಿ ಅಶಿಕ್ಷಿತರಾದ, ಸಮಾಜದಿಂದ ತಿರಸ್ಕೃತರಾದ, ನಿರುದ್ಯೋಗಿಗಳಾದ ಕೈದಿಗಳಲ್ಲಿ ಹೆಚ್ಚಾಗಿ ಪ್ರಚುರವಾಗಿರುವದು ಅಲ್ಲಿ ಅವರು ತಮ್ಮ ಮನಸ್ಸಮಾಧಾನಕ್ಕಾಗಿ ಇದನ್ನು ಆಚರಿಸುತ್ತಿರುವರು. ಗುದದ್ವಾರದ ವ್ರಣಗಳಲ್ಲಿ ಸೋಂಕಿದ ಗರಮೀ ರೋಗಗಳು ದವಾಖಾನೆಗಳಲ್ಲಿ ಈ ಕೃತ್ಯಕ್ಕೆ ಸಾಕ್ಷ್ಯವನ್ನು ನುಡಿಯುತ್ತಿರುವವು. ಇದೇ ತೆರದ ರೋಗಗಳು ಹೆಣ್ಣುಮಕ್ಕಳಲ್ಲಿಯೂ ವಿಶೇಷವಾಗಿ ವೇಶ್ಯೆಯರ ಸೆರೆಮನೆಗಳಲ್ಲಿಯೂಕಂಡು ಬರುವವು. ಎಷ್ಟು ಪೀಡಿಸಿ ಕೇಳಿದರೂ ಅವರು ಮೌನವಾಗಿರುವದು ಸ್ವಾಭಾವಿಕವಾಗಿದೆ. ಫೆಡರಿಕ್ ದ ಗ್ರೇಟ್ ನಂಥ ದೊಡ್ಡ ಅರಸನಿಗೂ ಸಮಲಿಂಗೀ ಮೈಥುನದ ಚಟವಿದ್ದಿತಂತೆ. ಇದರಿಂದ ಇಂಥ ಭಯಂಕರವಾದ ದುಶ್ಚಟದ ಬಗ್ಗೆಯೂ ನಾವು ನೈತಿಕ ಕಲ್ಪನೆಗಳ ಅಂಥತೆಯಿಂದ ದುರ್ಲಕ್ಷ್ಯವುಳ್ಳವರಾಗಿಸ್ವೇವೆಂಬುದು ವ್ಯಕ್ತವಾಗುವದು; ಇಂಥ ಭಯಂಕರ ರೋಗವು ಸರ್ವ ಸಾಮಾನ್ಯವಾಗುವವರೆಗೂ ನಾವು ಜನತೆಯನ್ನು ಅಜ್ಞಾನದ ಮುಸುಕಿನಲ್ಲಿಟ್ಟಿರುವೆವು.

ಈ ಸಮಲಿಂಗೀ ಸಂಭೋಗವು ಸ್ತ್ರೀಯರಲ್ಲಿಯೂ ವಿಶೇಷ ರೂಪದಿಂದುರುವದು ಕಾನೂನು, ಧರ್ಮ, ನೀತಿ ಮೊದಲಾದವುಗಳೆಲ್ಲವೂ ಸ್ತ್ರೀಯರಿಗ ಸ್ವಾಭಾ[illegible]ಯಿಂದ ಕಾಮ ತೃಪ್ತಿ ಮಾಡಿಕೊಳ್ಳಲು ಪ್ರತಿಕೂಲವಾಗಿರುವದರ ಪರಿಣಾಮವೇ ಇದು;— ಅವರು ಕಾಮ ತೃಪ್ತಿಗಾಗಿ ತಮ್ಮ ತಮ್ಮೊಳಗ ಪ್ರಿಯಕರ ಪ್ರಿಯಕರೆಯರಾಗಿ ವರ್ತಿಸಿ ಸಮಾಧಾನ ಹೊಂದುವರು. ಈ ಚಟವು ಹತ್ತಿದ ಸ್ತ್ರೀಯು ಕೊನೆತನಕ ಗಂಡನೆಂದರೆ ಸೇರಿಕೆಯಿಲ್ಲದವಳಾಗುವಳು; ಪುರುಷಸಂಗದ ವಿಲಾಸಗಳು ಅವಳಿಗೆ ದುಃಖದಾಯಕವಾಗುವವು. ಜಿತೇಂದ್ರಿಯರೆಂದು ಹೇಳಿಕೊಳ್ಳುವ ವಿಧವೆಯರಲ್ಲಿ, ಪರಿತ್ಯಕ್ತೆಯರಲ್ಲಿ, ಕುಮಾರಿಕೆಯರಲ್ಲಿ, ಹೆಚ್ಚೇನು, ಒಳ್ಳೇ ಪತಿವ್ರತೆಯೆಂದು ಎಂದುಕೊಳ್ಳುವವರಲ್ಲಿ ಬಹುಸಂಖ್ಯೆಯುವರನ್ನು ಈ ಚಟವು ಆಶ್ರಯಿಸಿಕೊಂಡಿರುವದು. ಇದು ರಹಸ್ಯವಾಗಿ ನಡೆಯುವದರಿಂದ, ಸಿದ್ಧಮಾಡಿ ತೋರಿಸಲು ಬರದಿರುವದರಿಂದ, ಜನರು ಅದನ್ನು ಹಾಗೇ ಮುಚ್ಚಿಡುವದರಲ್ಲಿ ಸಂತೋಷ ಪಡುತ್ತಾರಲ್ಲದೆ, ಅದನ್ನು ನಿವಾ

ರಿಸುವದಗತ್ಯವೆಂದು ಅವರಿಗೆನಿಸುವದೇ ಇಲ್ಲ. ಈ ದುಶ್ಚಟದಿಂದ ಹೆಣ್ಣು ಕ್ಕಳ ನರಮಂಡಲ ( Nervous System ) ಕ್ಕೆ ಧಕ್ಕೆ ತಗಲಿ ಅವರು ಪೀಡಿತರಾಗುವರು, ಎಲ್ಲ ಕಡೆಗೂ ಅಸಮಾಧಾನದ ಸಾಮ್ರಾಜ್ಯವನ್ನು ಹಬ್ಬಿಸುವರು. ಈ ಚಟಕ್ಕೆ ಬಿದ್ದ ಕನ್ಯೆಯರು ಮದುವೆಯಾದಮೇಲೆ ಗಂಡ ನನ್ನು ಸೇರುವದಕ್ಕೆ ಇಷ್ಟಪಡುವದಿಲ್ಲ. ಬಹಳ ಪ್ರಯತ್ನದಿಂದ ಅವಳನ್ನು ಅವನು ಒಲಿಸಿಕೊಳ್ಳಬೇಕಾಗುವದು. ನಮ್ಮ ಸಮಾಜದಲ್ಲಿ ಪ್ರಚುರ ವಿರುವ ಲೈಂಗಿಕ ನೀತಿಯ ಬಂಧನಗಳ ಮೂಲಕ ಗಂಡು ಹೆಣ್ಣುಗಳ ಮದುವೆಗೆ ಮುಂಚಿನ ಬಳಕೆಯನ್ನು ತಿರಸ್ಕರಿಸಲು ಕಾರಣವಾಗಿದೆ; ಮತ್ತು ತರುಣ ತರುಣಿಯರು ವಾಮಮಾರ್ಗದಲ್ಲಿ ನಡೆಯುವದಕ್ಕೆ ಮೂಲ ವಾಗಿದೆ. ಇದಂತಿರಲಿ. ಗಂಡಹೆಂಡಿರ ಸಂಭೋಗವೂ ಕೂಡ ಪಾಪಕೃತ್ಯ ವೆಂಬಂತೆ ವಕ್ರದೃಷ್ಟಿಯಿಂದ ನೋಡುವ ಮೂಢತೆಯೂ ನಮ್ಮಲ್ಲಿ ಕಡಿಮೆ ಯಿಲ್ಲ. ಲೈಂಗಿಕ ವ್ಯವಹಾರವನ್ನು ಕಠೋರ ದೃಷ್ಟಿಯಿಂದ ನೋಡುವಷ್ಟು ಇತರ ವ್ಯವಹಾರಗಳನ್ನು ನೋಡುವದಿಲ್ಲವಾದುದರಿಂದ ಇತರ ಪಾಪಗಳಿ ಗಿಂತ ಅನೈಸರ್ಗಿಕ ಭೋಗದ ಪಾಪಗಳು ಮಿತಿಮೀರಿರುವವು.

ಈ ತರಹದ ಘಾತಕ ಅನಾಚಾರಗಳನ್ನು ಹೋಗಲಾಡಿಸುವದು, ಕಠೋರ ಶಿಕ್ಷೆಯಿಂದಾಗಲಿ, ತಿರಸ್ಕಾರ ಬಹಿಷ್ಕಾರಗಳಿಂದಾಗಲಿ ಆಗುವದು ಸಾಧ್ಯವಿಲ್ಲ. ಪ್ರಕೃತಿ ಧರ್ಮಕ್ಕನುಗುಣವಾದ ಉಪಾಯಗಳನ್ನೇ ಯೋಜಿ ಸಬೇಕಲ್ಲದೆ, ಕಾಮದಹನದಿಂದ ಇದು ದೂರಾಗುವದೆಂಬದು ಬರೀ ಭ್ರಾಂತಿಯಾಗಿದೆ. ನಮ್ಮ ನೀತಿ ಕಟ್ಟಡವು ಸರಿಯಾದ ತಳಹದಿಯಮೇಲೆ ಕಟ್ಟಲ್ಪಟ್ಟಿದ್ದರೆ, ನಮ್ಮ ಕಾಯದೆಗಳು ಸರಿಯಾದ ರೀತಿಯಲ್ಲಿ ರಚಿಸಲ್ಪ ಟ್ಟಿದ್ದರೆ, ಧರ್ಮಗುರುಗಳಾಗಲಿ ಪೋಲಿಸರಾಗಲಿ ಈ ದುಶ್ಚಟಗಳನ್ನೂ ಈ ವೇಶ್ಯಾವೃತ್ತಿ-ವ್ಯಭಿಚಾರಗಳನ್ನೂ ಹೋಗಲಾಡಿಸಲು ಎಂದೋ ಸಮ ರ್ಥರಾಗುತ್ತಿದ್ದರು. ಆದರೆ ನಮ್ಮ ಜನಗಳಿಗೆ ಕಾಮದಹನದ ಭ್ರಾಂತಿ ಬಿಟ್ಟಿಲ್ಲ.



# ಬಡತನ ಮತ್ತು ಸಂತಾನ ನಿರೋಧ!



ಬಡತನವೇ ಅಸಂಖ್ಯ ಪಾಪಗಳಿಗೆ ಮೂಲ! ಅಪರಾಧ, ವೇಶ್ಯಾ ವೃತ್ತಿ, ಕುಡುಕತನ ಮುಂತಾದ ಅಸಂಖ್ಯ ದುಶ್ಚಟಗಳು ಬಡತನದಿಂದಲೇ ಬೆಳೆದು ಬಂದಿವೆ. ಬಡತನ ನಿವಾರಣೆಯಾಗದ ಹೊರತು ಯಾವ ಸಾಮಾಜಿಕ ಸುಧಾರಣೆಗಳೂ ಆಗಲಾರವು. ನಮ್ಮ ಹಿಂದುಸ್ಥಾನವಂತೂ ಬಡತನದ ತವರುಮನೆಯಾಗಿಬಿಟ್ಟಿದೆ. ಆಯಾ ಋತುಮಾನಗಳಲ್ಲಿ ಬೆಳೆಯುತಕ್ಕ ವಿಶಿಷ್ಟ ಪದಾರ್ಥಗಳನ್ನು ಕೊಂಡುಕೊಳ್ಳುವ ಯೋಗ್ಯತೆ ಎಲ್ಲರಲ್ಲಿರುವದಿಲ್ಲ. ಮುಗ್ಗು ಜೋಳದ ರೊಟ್ಟಿ ಸಿಕ್ಕರೆ ಸಾಕೆಂದು ಬಾಯಿ ತೆರೆದು ಕುಳಿತುಕೊಂಡವರ ಸಂಖ್ಯೆಯೇ ಹೆಚ್ಚಾಗಿದೆ. ಬಡತನ ಬೆಳೆಯುತ್ತ ನಡೆದಂತೆ ಸಂತಾನವೃದ್ಧಿಯಾಗುವದರಲ್ಲೇನೂ ಕಡಿಮೆಯಾಗಿಲ್ಲ. ರಿ. ಮಾಲ್ಥಸರು ಹೇಳಿದಂತೆ "ಕೆಲವೊಂದು ಕಾಲಾವಧಿಯಲ್ಲಿ ಅನ್ನ ಸಾಮುಗ್ರಿಗಿಂತ ಪ್ರಜಾ ಸಂಖ್ಯೆಯೇ ಹೆಚ್ಚಾಗುತ್ತದೆ" ಎಂಬ ಮಾತು ಸತ್ಯವೆನ್ನುವಂತೆ ನಮ್ಮ ದೇಶದ ಪರಿಸ್ಥಿತಿಯಾಗಿದೆ. ಪ್ರಜಾಸಂಖ್ಯೆ ಹೆಚ್ಚಿದಂತೆ ಬಡತನವೂ ಹೆಚ್ಚುತ್ತದೆ. ಬಡವರಿಗೆ ತಮ್ಮ ಮಾನಸಿಕ, ಶಾರೀರಿಕ ಮತ್ತು ಆಧ್ಯಾತ್ಮಿಕ ಶಕ್ತಿಗಳನ್ನು ಉಪಯೋಗಿಸಲು ಆಸ್ಪದವಿರುವದಿಲ್ಲವಾದ್ದರಿಂದ, ಅವರ ಶಕ್ತಿ ಸರ್ವಸ್ವವೆಲ್ಲ ಪ್ರಜೋತ್ಪಾದನೆಯಲ್ಲಿಯೇ ವೆಚ್ಚವಾಗುತ್ತದೆ. ಅವರ ದುಡಿಮೆಯ ಬೆಲೆಯಾದರೂ ಕಡಿಮೆ ಇರುತ್ತದೆ.

ಲೈಂಗಿಕ ವಿಷಯವು ಆರ್ಥಿಕ, ಸಾಮಾಜಿಕ, ರಾಜಕೀಯ ಈ ಎಲ್ಲವುಗಳ ಮೂಲವಾಗಿದೆಯಾದ್ದರಿಂದ ಇದನ್ನು ಬಿಡಿಸದ ವಿನಃ ಮಾನವ

ಜೀವಿತದ ಯಾವ ಪ್ರಶ್ನೆಗಳೂ ಸರಿಯಾಗಿ ಬಿಡಲಾರವು. ಇದು ಕೇವಲ ವಿಲಾಸಕ್ಕೆ ಸಂಬಂಧಪಟ್ಟ ಪ್ರಶ್ನೆಯಲ್ಲ ಮೊದಲು ಬ್ರಹ್ಮಚರ್ಯ, ಗೃಹಸ್ಥ, ವಾನಪ್ರಸ್ಥ, ಮತ್ತು ಸನ್ಯಾಸವೆಂಬ ನಾಲ್ಕು ಆಶ್ರಮ ಪದ್ಧತಿಗಳ ಕಟ್ಟು ಇದ್ದಿತು. ಈಗೀಗ ಅವು ಉಪಹಾಸದ ವಿಷಯಗಳಾಗಿದ್ದು, ಗೃಹಸ್ಥಾಶ್ರಮವೊಂದೇ ಉಳಿದುಕೊಂಡಿದೆ ಹೀಗಾಗಿ ಪ್ರಜಾಭಿವೃದ್ಧಿಯು ವಿಪರೀತವಾಗಿ ಆಗಿದೆ.

ಬೆಳೆಯುತ್ತ ನಡೆದಿರುವ ಪ್ರಜಾಭಿವೃದ್ಧಿಯನ್ನು ತಡೆಯಲು ಅನೇಕ ಉಪಾಯಗಳು ನಡೆದಿವೆ. ಪ್ರಜಾಭಿವೃದ್ಧಿಯನ್ನು ತಡೆಯುವ ಬದಲು ಬಡತನ ನಿವಾರಣೆಗೆ ಪ್ರಯತ್ನಿಸಬೇಕೆಂದು ಕೆಲವರೆನ್ನುತ್ತಾರೆ ಆದರೆ ಇದು ಅಸಾಧ್ಯವಾದ ಮಾತು ಸಂತತಿ ನಿಯಮನವೇ ಇದಕ್ಕೆ ಹಿರಿದಾದ ಮದ್ದು. ಆದರೆ— ಬ್ರಹ್ಮಚರ್ಯವೇ ಶ್ರೇಷ್ಠವಾದ ಉಪಾಯವೆಂದು ನೀತಿಶಾಸ್ತ್ರಜ್ಞರು ಹೇಳುತ್ತಾರೆ. ಈ ಮಾತಿನಲ್ಲಿ ತಥ್ಯವಿಲ್ಲ. ಅದರಿಂದಾಗಬಹುದಾದ ದುಷ್ಪರಿಣಾಮಗಳನ್ನು ಈ ಹಿಂದೆಯೇ ವರ್ಣಿಸಿದ್ದು ತಮಗೆ ಗೊತ್ತಿರಲಿಕ್ಕೆ ಸಾಕು. ವೀರ್ಯವಾಗಲಿ, ಮುಟ್ಟಾಗಲಿ ದೇಹದೊಳಗಿಂದ ಹೊರಗೆ ಹೋಗತಕ್ಕಂಥ ಒಂದು ಮಾದರಿಯ ಸ್ರಾವಗಳು. ಮಿಕ್ಕ ಮಲಮೂತ್ರಾದಿ ಸ್ರಾವಗಳಂತೆ ಅವುಗಳ ಬಗ್ಗೆಯೂ ದಕ್ಷತೆಯಿಂದಿರಬೇಕು. ಅವನ್ನು ದೇಹದಲ್ಲಿ ತಡ ಹಿಡಿದರೆ ದೇಹಕ್ಕೆ ಅಪಾಯವುಂಟು. ಅವನ್ನು ತಡೆ ಹಿಡಿಯುವದರಿಂದ ಬುದ್ಧಿ ವಿಕಾಸವಾಗುತ್ತದೆಂದು ಯಾರಾದರೂ ಹೇಳುತ್ತಿದ್ದರೆ, ಅವರಿಗೆ ಶರೀರ ವಿಜ್ಞಾನ ಶಾಸ್ತ್ರದ ಗಂಧಕೂಡ ಗೊತ್ತಿಲ್ಲೆಂದು ಹೇಳಬಹುದು. ಸಂತತಿ ನಿಯಮನದ ಉಪಾಯಗಳೆಲ್ಲ ಕೃತ್ರಿಮವಾದವುಗಳಲ್ಲವೇ ? ಎಂಬ ಪ್ರಶ್ನೆಯು ಉದ್ಭವಿಸಬಹುದು. ಆದರೇನು ? ನಮ್ಮ ಇಡೀ ಜೀವನವೇ ಕೃತ್ರಿಮತೆಯುಳ್ಳದ್ದಾಗಿದೆ. ಇದ್ದುದರಲ್ಲಿಯೇ ಕಡಿಮೆ ನಷ್ಟವುಳ್ಳ ಉಪಾಯಗಳನ್ನು ಅಪರಿಹಾರ್ಯವಾಗಿ ಕೈಕೊಳ್ಳಬೇಕು. Lesser evil is preferred to greater evil ಎಂದು ಆಂಗ್ಲ ಪಂಡಿತರೊಬ್ಬರು ನುಡಿದೇ ಬಿಟ್ಟಿದ್ದಾರೆ.

ಈ ಉಪಾಯಗಳಲ್ಲಿ ಸುಲಭವಾದ ಉಪಾಯವೆಂದರೆ ಮುಟ್ಟಿಗೆ ಮೊದಲು ನಾಲ್ಕು ದಿವಸ-- ಮುಟ್ಟಾದ ಮೇಲೆ ಹನ್ನೆರಡು ದಿನ ಸಂಭೋಗಿಸದೆ ಇರುವದು. ನೂರಕ್ಕೆ ಎಂಬತ್ತರಷ್ಟು ಇದರ ಪರಿಣಾಮವಾಗುತ್ತದೆ. ಎರಡನೆಯ ಉಪಾಯ--- ಯೋನಿಯಲ್ಲಿ ವೀರ್ಯವು ಪ್ರವೇಶಿಸದಂತೆ ಮಾಡುವದು. ಪುರುಷರು ಸಂಭೋಗದ ಕಾಲಕ್ಕೆ ಲಿಂಗಕ್ಕೆ ಚೀಲ, ಟೊಪ್ಪಿಗೆ ಮುಂತಾದವನ್ನು ಉಪಯೋಗಿಸಬೇಕಾಗುತ್ತದೆ. ಮೂರನೆಯ ಉಪಾಯವೆಂದರೆ- ಸ್ತ್ರೀಯರು ತಮ್ಮ ಯೋನಿದ್ವಾರದಲ್ಲಿ ಸ್ಪಂಜು ಮುಂತಾದವುಗಳನ್ನು ಉಪಯೋಗಿಸುವದು, ಸಂಭೋಗವಾದ ಕೂಡಲೆ ಬೆಚ್ಚಗಿನ ನೀರಿನಿಂದ ತೊಳೆದುಕೊಳ್ಳುವದು. ಇದರಿಂದ ವೀರ್ಯವು ತೊಳೆದು ಹೋಗುವದಲ್ಲದೆ ಜೀವಾಣುಗಳ ಶಕ್ತಿಯು ಗರ್ಭಧಾರಣೆ ಮಾಡಲು ಅಸಮರ್ಥವಾಗುವದು.

ಇಂಥ ಉಪಾಯಗಳ ವಿಚಾರವನ್ನು ಸಹ ಜನರು ಮಾಡಲು ಸಿದ್ಧರಿಲ್ಲ. ಕೆಲವರಂತೂ ಈ ಉಪಾಯಗಳಿಂದ ಪ್ರೌಢ ಕುಮಾರಿಯರು, ವಿಧವೆಯರು, ಪರಿತ್ಯಕ್ತರು ಅಡ್ಡದಾರೀ ಹಿಡಿಯಬಹುದೆಂದು ಹೆದರುತ್ತಾರೆ. ಹೀಗೆ ಹೆದರುವದರಲ್ಲಿ ತಥ್ಯವಿಲ್ಲ. ಇದರಿಂದ ಪ್ರಜೋತ್ಪಾದನದ ಹೊಣೆಯನ್ನು ಹೊತ್ತು ಬಳಲುವ ಹೆಣ್ಣುಮಕ್ಕಳ ಸ್ಥಿತಿಯು ಶೋಚನೀಯವಾಗುವದು. ಈಗಿನ ಕಾಲದಲ್ಲಿ ಮಾನವ ಜಾತಿಯ ಹಿತವನ್ನು ಬಯಸುವವನ ಮುಖ್ಯ ಕರ್ತವ್ಯವೆಂದರೆ, ಸಂತತಿ ಪ್ರತಿಬಂಧಕ ಉಪಾಯಗಳ ಪ್ರಚಾರ ಮಾಡುವದು. ಅಲ್ಪ ಬೆಲೆಯಲ್ಲಿ ನಿರಪಾಯಕರವಾದ ಸಾಧನವನ್ನು ಹುಡುಕುವದರಲ್ಲಿ ತಮ್ಮ ಬುದ್ಧಿಯನ್ನೆಲ್ಲ ವೆಚ್ಚ ಮಾಡುವದು ಶಾಸ್ತ್ರಜ್ಞರ ಕರ್ತವ್ಯವಾಗಿದೆ. ಇಂಥ ಶಾಸ್ತ್ರಜ್ಞರು ತಮಗೆ ತಿಳಿದುಬಂದ ಅನುಭವಗಳನ್ನೆಲ್ಲ ಜನತೆಯ ಮುಂದಿಡಬೇಕು. ಪ್ರತಿಯೊಬ್ಬರು ಎರಡು ಮೂರು ಮಕ್ಕಳಾಗುತ್ತಲೆ ಈ ಉಪಾಯವನ್ನು ಕೈಕೊಂಡರೇನೂ ಬಾಧಕವಿಲ್ಲ. ೨--೩ ಮಕ್ಕಳನ್ನು ಹಡೆದು ಸಂತಾನ ನಿರೋಧ ಮಾಡಿದ ಹೆಂಗಸು ಆರೋಗ್ಯಶಾಲಿಯಾಗಿರುವದರಲ್ಲಿ ಸಂಶಯವಿಲ್ಲ. ಆ ಬಳಿಕ ಅವರ ಕುಟುಂಬವೆಲ್ಲವೂ ಸುಖಿಯಾಗಿರಬಲ್ಲದು. ಸುಮ್ಮನೆ ರಾಶಿರಾಶಿ ಮಕ್ಕಳನ್ನು ಹಡೆದು ಕೂಳು ನೀರಿಲ್ಲದೆ ಅವರ ಜೀವವನ್ನು ಮರುಗಿಸಿ

ಗೋಳಾಡುವದರಲ್ಲಿ ಲಾಭವೇನೂ ಇಲ್ಲ. ಅದರಿಂದ ಒಂದು ಪಾಪವನ್ನೇ ಕಟ್ಟಿಕೊಂಡಂತಾಗುತ್ತದೆ. ಈ ಕೃತ್ರಿಮ ಉಪಾಯವನ್ನು ಕೈಕೊಳ್ಳುವದೆಂದರೆ ಶಿಸುಹತ್ಯೆ ಮಾಡಿದಂತಾಗುವದೆಂದು ಕೆಲವರ ಕಲ್ಪನೆ. ಆದರೆ ಸೂಕ್ಷ್ಮರೀತಿಯಿಂದ ವಿಚಾರ ಮಾಡಿದರೆ ಸಂತತಿ ನಿಯಮನವು ಕೊಲೆಯಾಗಿರದೆ ಕೊಲೆಯ ಪ್ರತಿಬಂಧಕ ಉಪಾಯ ವಾಗಿರುವದು. ಇದು ಅನೀತಿ ಮಾರ್ಗವಾಗಿರದೆ ನೀತಿಯ ಪ್ರಚಾರವಾಗಿದೆಯೆನ್ನಬಹುದು. ಸಮಾಜದಲ್ಲಿ ಕಂಡುಬರುವ ಲೈಂಗಿಕ ದೋಷಗಳಾಗಲಿ, ಬಡತನದ ದೋಷಗಳಾಗಲಿ ನಿವಾರಣೆಯಾಗಬೇಕಾದರೆ ಸಂತಾನ ನಿರೋಧವು ಅದಕ್ಕೆ ಒಳ್ಳೇ ಉಪಾಯವಾಗಿದೆ. ಪಾಲನೆ ಪೋಷಣೆಯ ಸಾಮರ್ಥ್ಯವಿಲ್ಲದೆ, ಒಂದೇಸವನೆ ಮಕ್ಕಳನ್ನು ಹಡೆದು ಅನ್ನಾನ್ನಗತಿಕರನ್ನಾಗಿ ಮಾಡಿ ಭೂಮಿಗೆ ಭಾರವಾಗಿ ಮಾಡುವದಕ್ಕಿಂತ ಮೊದಲೇ ಏನಾದರೊಂದು ಅಪಾಯವಿಲ್ಲದ ಒಳ್ಳೇ ಉಪಾಯ ಕೈಕೊಂಡು ಸಂತಾನ ನಿರೋಧ ಮಾಡುವದು ನೀತಿವಂತರ ಪವಿತ್ರ ಕರ್ತವ್ಯವಾಗಿದೆ.



# ಏಕ ಪತ್ನಿತ್ವರೋಗ



ಪ್ರಜೋತ್ಪಾದನದ ಭಾರವು ಹೆಣ್ಣುಮಕ್ಕಳ ಮೇಲೆ ಹೆಚ್ಚಿಗೆ ಇರುವದರಿಂದ ಸೃಷ್ಟಿಯಲ್ಲಿ ಸ್ತ್ರೀ ಸಂಖ್ಯೆಯು ಹೆಚ್ಚಾಗಿರುವದು ಸಾಮಾನ್ಯ ಪ್ರಕೃತಿಧರ್ಮವಾಗಿದೆ. ಆದುದರಿಂದ ಪ್ರಚಲಿತ ವಿವಾಹ ಪದ್ಧತಿಯಲ್ಲಿಯ ಸಾಮಾನ್ಯ ಕಲ್ಪನೆಯ ಮೇರೆಗೆ ಒಂದು ಗಂಡಿಗೆ ಒಂದು ಹೆಣ್ಣು ಎಂದು ಜೋಡು ಮಾಡುತ್ತ ಹೋದರೆ, ಬಹಳ ಹೆಣ್ಣುಮಕ್ಕಳು ಒಡನಾಡಿಯಿಲ್ಲದೆ ಉಳಿಯುವರು. ಇದರಿಂದ ಅವರಲ್ಲಿ ಮತ್ಸರ ಸ್ಪರ್ಧೆಗಳು ಹೆಚ್ಚಿ ಸಮಾಜವು ಅಸ್ವಸ್ಥವಾಗುವದು. ಇದರಿಂದುಂಟಾಗತಕ್ಕ ನಷ್ಟವನ್ನು ಸಮಾನ ಹಕ್ಕನ್ನು ಬೇಡುವ, ಸ್ವಾತಂತ್ರ್ಯ ಪ್ರಿಯರಾದ ಸುಶಿಕ್ಷಿತ ನಾರಿಯರಿಗೆ ಮನವರಿಕೆ ಮಾಡಿಕೊಡುವದು ಅತ್ಯಂತ ಕಷ್ಟಸಾಧ್ಯವಾಗಿದೆ. ಗಂಡಸಿನ ವೀರ್ಯಕ್ಕೆ, ಪ್ರತಿಯೊಂದು ಸ್ಖಲನದೊಡನೆ ಗರ್ಭಾಧಾನ ಶಕ್ತಿಯುಳ್ಳ ಸಾವಿರಾರು ಪುಂಬೀಜಗಳನ್ನು ಹೊರಗೆಡವುವ ಶಕ್ತಿಯನ್ನು ಪ್ರಕೃತಿಯು ದಾನ ಮಾಡಿರುವದು. ಸ್ತ್ರೀಯರಲ್ಲಿ ಒಂದೇ ಒಂದು ಗರ್ಭಧಾರಕ ಡಿಂಭವು ಹೊರಬೀಳುತ್ತಿರುವದು. ಈ ಪ್ರಕೃತಿ ತತ್ವವು ಕೂಡ ಗಂಡಿನ ಹುಟ್ಟು ಕಡಿಮೆಯೆಂಬುದಕ್ಕೆ ಪ್ರಮಾಣವಾಗಿದೆ. ಆದ್ದರಿಂದ ಲೆಕ್ಕಾಚಾರದಂತೆ ಮತ್ತು ತತ್ವತಃ ಏಕಪತ್ನಿತ್ವವು ಸಮಂಜಸವಲ್ಲವೆಂದು ಸಿದ್ಧವಾಗುತ್ತದೆ. ಆದರೆ ಒಂದೇ ಒಂದು ಲಿಂಗ ಸಂಬಂಧವು ಯೋಗ್ಯವಾದದ್ದೆಂಬ ನೀತಿ ಧರ್ಮವು ಹುಟ್ಟಿದ್ದೇಕೆ? ಚಿರಕಾಲ ಬಾಳುವಂಥ ಹಾಗೂ ಸುಸ್ಥಿರವಾದ ( Unvarying ) ಪ್ರೇಮವು ಪವಿತ್ರವಾದದ್ದು, ಗೌರವಾರ್ಹವಾದದ್ದು ಎಂಬ ಕಲ್ಪನೆಯೇ ಈ ನೀತಿ ಕಟ್ಟಳೆಯ ಉಗಮಸ್ಥಾನವು. ಈ ಕಲ್ಪನೆಯೊಂದು ದೊಡ್ಡ ತಪ್ಪು. ಮಿಕ್ಕೆಲ್ಲ ಮಾನವೀ ಭಾವ

ನೆಗಳು, ವಾಸನೆಗಳು, ಆಶೆ ಆಕಾಂಕ್ಷೆಗಳು ಮೊದಲಾದವುಗಳಂತೆ—ಈ ಪ್ರೇಮವಾದರೂ ವೈವಿಧ್ಯ ವೈಚಿತ್ರ್ಯಗಳನ್ನೊಳಗೊಂಡಿದೆ. ಪ್ರೇಮ ಪಾತ್ರರಲ್ಲಿದ್ದ ವಿವಿಧತೆಯಿಂದ ಪ್ರೇಮವು ಶಕ್ತಿಯನ್ನೂ ಸಾತತ್ಯವನ್ನೂ ಕಳೆದುಕೊಳ್ಳುತ್ತಿರುವದು. ಅದನ್ನು ಒಂದೆಡೆಗೆ ಕೇಂದ್ರೀಕರಿಸಲು ಯತ್ನಿಸುವದೆಂದರೆ ಪ್ರಕೃತಿ ಧರ್ಮವನ್ನು ಬುಡಮೇಲು ಮಾಡಲು ಹೊರಟಂತೆಯೇ ಸರಿ.

ಪ್ರಬಲ ವಿಕಾರಗಳುಳ್ಳ ಹರಯವು ಬದಲಾಗುತ್ತಿರುವದು. ವಿವಿಧ ತೆರನಾದ ಅನುಭವಗಳಿಂದ ನಮ್ಮ ವಿವಿಧ ತೆರನಾದ ಶಕ್ತಿಗಳು ಮತ್ತು ಭಾವನೆಗಳು ವಿಕಾಸ ಹೊಂದಬೇಕೆಂದು ಪ್ರಕೃತಿಯ ಕಟ್ಟಳೆಯಿರುವದು. ತಾರುಣ್ಯದಲ್ಲಿಯ ಚಂಚಲ ವೃತ್ತಿಯನ್ನು ಅಥವಾ ಅಸ್ಥೈರ್ಯವನ್ನು ಅದೊಂದು ಪಾಪವೆಂದು ಹಳಿಯುವದು ಸೃಷ್ಟಿಗಿಂತ ಅಥವಾ ಸೃಷ್ಟಿಕರ್ತನಿಗಿಂತ ನಾವೇ ಬುದ್ಧಿವಂತರೆಂದು ಅಂದಂತೆಯೆ. ನಿತ್ಯ ನೂತನವಾದ ಪ್ರವೃತ್ತಿಗಳಿಂದ ತರುಣ ತರುಣಿಯರು ಬಹಿರಂಗ ರೂಪಕ್ಕೆ ಮನಸೋತು ಒಬ್ಬರನ್ನೊಬ್ಬರು ಪ್ರೀತಿಸುವರು. ಆದರೆ ಹತ್ತಕ್ಕೊಬ್ಬರಾದರೂ ತಮ್ಮ ಮೊಟ್ಟಮೊದಲಿನ ಪ್ರಿಯಕರರೊಡನೆಯೇ ಲಗ್ನವಾಗುವರೋ ಇಲ್ಲವೊ ! ಹೀಗಾಗುವದಕ್ಕೆ ಕಾರಣ, ಕೆಲವೊಂದು ಕಾಲಾವಧಿ ಅವರು ತಮ್ಮ ಪ್ರೇಮಕ್ಕಾಗಿ ಪಶ್ಚಾತ್ತಾಪ ಪಡುವರು. ತಮ್ಮ ಸ್ವಭಾವದ ಪರಿಚಯವೇ ತಮಗಿಲ್ಲದಾಗ ಅವರು ಅನ್ಯರ ಸ್ವಭಾವಾದಿಗಳನ್ನು ಹೇಗೆ ತಿಳಿಯಬಲ್ಲರು ? ಮುಂದೆ ಮುಂದೆ ಮೊದಲಿನವರಿಗಿಂತ ಹೆಚ್ಚು ಹೆಚ್ಚು ಸಮಾನಶೀಲರೂ, ಆಕರ್ಷಕರೂ ಆದ ಜನರು ಕೂಡುವರೆಂಬುದನ್ನು ಆ ತರುಣ ತರುಣಿಯರು ಇಂದೆಯೇ ಹೇಗೆ ಅರಿಯಬಲ್ಲರು !

ಹೊಸ ವಿಕಾರಗಳ ಪ್ರೇರಣೆಗಳಿಂದ ಕುರುಡರಾದ ಹಾಗೂ ಅನನುಭವಿಕರಾದ ತರುಣ ತರುಣಿಯರು ಮದುವೆಯಾಗುವದೆಂದರೆ, ಭಾವೀ ದುಃಖಕ್ಕೆ ಆಮಂತ್ರಣ ಕೊಟ್ಟಂತೆಯೇ ಸರಿ. ಸುಖ ಸಾಧನೆಗೆ ಆವಶ್ಯಕವಾದ ಅನುಭವವು ಲೈಂಗಿಕ ಸಹಕಾರಿಗಳನ್ನಾರಿಸಿಕೊಳ್ಳುವದರಲ್ಲಿ ಇಲ್ಲದಿರುವದರಿಂದ ಅಂತಹ ವಿವಾಹವು ಜಯಶೀಲವಾಗುವದಿಲ್ಲ. ಬಹಿರಂಗ ಪರಿಚಯದಿಂದ ಪರಸ್ಪರರ ಗುಣಾವಗುಣಗಳು ತಕ್ಕಮಟ್ಟಿಗೆ ತಿಳಿಯ

ಬಹುದು; ಆದರೆ ಬಂಜೆತನ, ನಪುಂಸಕತ್ವ ಮುಂತಾದ ದೋಷಗಳೂ ಆವಶ್ಯಕವಾದ ಲೈಂಗಿಕ ವಿಷಯವೂ ಶರೀರ ಸಂಬಂಧವುಂಟಾಗದೆ ತಿಳಿಯುವದೆಂತು ? ಈ ತರದ ಅಜ್ಞಾನದಿಂದಾವೃತರಾದ ತರುಣ ತರುಣಿಯರಿಂದ, 'ಧರ್ಮೇ ಚ, ಅರ್ಥೇ ಚ, ಕಾಮೇ ಚ, ನಾತಿಚರಾಮಿ' ಮುಂತಾಗಿ ಪ್ರತಿಜ್ಞೆ ಮಾಡಿಸುವದರಿಂದ ಏನು ಪ್ರಯೋಜನ ? ಈ ಪ್ರತಿಜ್ಞೆಯು ವಸ್ತುಸ್ಥಿತಿಯಲ್ಲಿ ಆಚಾರ ಬಾಹಿರವಾಗಿರುತ್ತದೆಂಬುದು ಕಂಡ ಮಾತೇ ಆಗಿದೆ.

ಲೈಂಗಿಕ ರೋಗಗಳ ನಿವಾರಣೆಗಾಗಿಯಾಗಲಿ, ಬೇರೆ ಬೇನೆ ಬೇಸರಿಕೆಗಳ ಮೂಲಕವಾಗಲಿ ದಂಪತಿಗಳಲ್ಲೊಬ್ಬರಿಗೆ ಸಂಭೋಗವು ಬೇಡಾಗಿದ್ದರೆ, ಇನ್ನೊಬ್ಬರಿಗೂ ಬೇಡಾಗಿರುವದೇ ? ಇಂಥ ಪರಿಸ್ಥಿತಿಯಲ್ಲಿ ತಾರುಣ್ಯದಲ್ಲಿ ಆರೋಗ್ಯಕ್ಕಾಗಿ ಆವಶ್ಯಕವಾದ ಸಂಭೋಗವು ಪ್ರಸ್ತುತ ವಿವಾಹ ಪದ್ಧತಿಯಲ್ಲಿ-- ಎಂದರೆ ಏಕಪತ್ನಿತ್ವ, ಏಕಪತಿತ್ವಗಳ ತಳಹದಿಯ ಮೇಲೆ ನಿರ್ಮಿತವಾದ ವಿವಾಹ ಪದ್ಧತಿಯಲ್ಲಿ-- ದೊರೆಯುವದು ಶಕ್ಯವೇ ? ತಾರುಣ್ಯದ ಅಗತ್ಯದ ಅಪೇಕ್ಷೆಯಾದ ಸಂಭೋಗಕ್ಕೋಸುಗ ಲಗ್ನ ಮಾಡಿಬಿಡುವದಾದರೆ ಸ್ವಭಾವ ದೋಷಗಳ ಮೂಲಕ ಆಯುಷ್ಯವು ದುಃಖಮಯವಾಗುವ ಸಂಭವವು ವಿಶೇಷವಾಗಿರುವದು. ಲಗ್ನ ಮಾಡದಿದ್ದರಾಗಲಿ, ಲಗ್ನಬಾಹ್ಯ ಸಂಭೋಗಕ್ಕೆ ಇಂಬುಗೊಡದಿದ್ದರಾಗಲಿ ಮಿಕ್ಕ ಅನಾಹುತಗಳು— ಮುಷ್ಟಿ ಮೈಥುನ, ಸ್ವರತಿ, ವೇಶ್ಯಾವೃತ್ತಿ ಮುಂತಾದವು-- ಉಂಟಾಗುವವು.

ಮುರಿಯ ಬಾರದಂಥ ಮದುವೆಯ ಕಟ್ಟು ಭಯಂಕರ ಘಾತಕವಾದ ಪರಿಣಾಮಗಳನ್ನುಂಟುಮಾಡುವದು. "ಬಹುಭಾಗದ ಕೊಲೆಗಳು ಹಾಗೂ ಪಾಶವೀಯ ಅತ್ಯಾಚಾರಗಳು ಗಂಡಂದಿರು ಹೆಂಡರ ಮೇಲೆ ನಡೆಸಿದವುಗಳೇ ಆಗಿವೆ. ಬಿಡುಗಡೆಗೆ ಎಡೆಯಿಲ್ಲದ ಲಗ್ನಬಂಧನವೇ ಇದಕ್ಕೆ ಮೂಲ" ಎಂದು ಹಿಲ್ ಸಾಹೇಬರು ತಮ್ಮ "ಅಪರಾಧ" ( Crime ) ಎಂಬ ಪುಸ್ತಕದಲ್ಲಿ ಸ್ಪಷ್ಟವಾಗಿ ನುಡಿದಿದ್ದಾರೆ. ಮಕ್ಕಳ ಹಿತಕ್ಕಾಗಿ ಚಿರಸಂಬಂಧದ ಲಗ್ನದ ನಿರ್ಬಂಧನೆಯು ಅಗತ್ಯವಾದದ್ದೆಂದು ಕೆಲವರು ಅಭಿಪ್ರಾಯಪಡುವರು. ಆದರೆ ಕೂಡಿಬಾರದ, ಆದರೂ ಬಿಡು

ಗಡೆ ಹೊಂದಲಾರದ ದಂಪತಿಗಳಲ್ಲಿ ನಡೆಯಬಹುದಾದ ಸಿಡುಕು ಸಿಟ್ಟು ಗಳು, ದ್ವೇಷ ಕಲಹಗಳು, ತಿರಸ್ಕಾರದ ವಾತಾವರಣವು ಮಕ್ಕಳಿಗೆ ಅದೆಂತು ಹಿತಕರವೋ ದೇವರೇ ಬಲ್ಲ. ಹೆಂಗಸರನ್ನು ಅವಹೇಲನೆಗೆ ಗುರಿಪಡಿಸಿದ್ದು ಈಗಿನ ವಿವಾಹ ಸಂಸ್ಥೆಯೇ ಎಂದು ನಿಸ್ಸಂದೇಹವಾಗಿ ಹೇಳಬಹುದು. ಏಕಪತ್ನೀತ್ವದ ಗುಣದೋಷಗಳೊಂದಿಗೆ ಬಹುಪತ್ನಿತ್ವದ ಗುಣದೋಷಗಳನ್ನು ಹೋಲಿಸಿ ನೋಡಿ, ಕೆಲವರು ಏಕಪತ್ನಿತ್ವದ ಘನತೆ ಯನ್ನು ಕೊಂಡಾಡುವರು. ಆದರೆ ಅದರ ಗುಣದೋಷಗಳನ್ನು ಪ್ರಕೃತಿ ಧರ್ಮದೊಡನೆ ಸರಿಹಚ್ಚಿ ನೋಡಿದರೆ ಅದು ಎಷ್ಟು ಘಾತಕವಾದದ್ದೆಂ ಬುದು ಒಡೆದುಕಾಣುವದು.

ನಮ್ಮಲ್ಲಿ ಪ್ರೇಮ ವಿವಾಹವು ಎಲ್ಲಿದೆ ? ಕಥೆ ಕಾದಂಬರಿಗಳಲ್ಲಿ ! ಸಮಾಜದಲ್ಲಿಯೋ ಸಂಪತ್ತು, ಅಧಿಕಾರ, ದರ್ಜೆ; ಅಪರಿಹಾರ್ಯತೆ ಇತ್ಯಾದಿಗಳೇ ಗಂಡು ಹೆಣ್ಣುಗಳನ್ನು ಎಳೆದು ಕೂಡಿಸುತ್ತಿರುವವು.

ಸ್ತ್ರೀಯಲ್ಲಿ ಕಂಡುಬರುವ ಅವಿದ್ಯೆ, ಕೀಳ್ಮೆ, ಪರಾಧೀನತೆ, ಪರಾವ ಲಂಬನ ಮೊದಲಾದವುಗಳು ಅವಳು ಪ್ರೇಮ ವಿವಾಹಕ್ಕೆ ಅನರ್ಹಳೆಂಬ ನಮ್ಮ ಶಾಸ್ತ್ರಗಳ ಭಾವನೆಯ ನಿದರ್ಶನಗಳಾಗಿವೆ. ಅವಳ ಸತಿತ್ವವೆಂದರೆ ಶಾಸ್ತ್ರಬದ್ಧ-- ಶಾಸನಬದ್ಧ ವೇಶ್ಯಾವೃತ್ತಿಯೆಂದೇ ಹೇಳಲು ಭಯವಿಲ್ಲ; ಪ್ರೇಮದ ವ್ಯತಿರಿಕ್ತವಾದ ಮಿಕ್ಕ ಲಾಭಗಳ ಆಮಿಷಗಳಿಗೆ ಅವಳು ತನ್ನ ದೇಹವನ್ನು ಮಾರಿಕೊಂಡಿರುವಳು; ಸಾಮಾಜಿಕ, ಧಾರ್ಮಿಕ ಬಂಧನಗ ಳಿಂದ ದೈಹಿಕ, ಮಾನಸಿಕ ದೌರ್ಬಲ್ಯಕ್ಕೀಡಾದ ಅವಳಿಗೆ ಗಂಡನಿಂದ ಪ್ರೇಮಕ್ಕಿಂತ ಸಂರಕ್ಷಣೆಯನ್ನೇ ಮುಖ್ಯವಾಗಿ ಅಪೇಕ್ಷಿಸುವದು ಅನಿ ವಾರ್ಯವಾಗಿರುವದು. ಪ್ರೇಮರಹಿತ ಬಂಧನದಲ್ಲಿ ಸುಖವನ್ನರಸಿದರೆ ಸಿಗಬೇಕೆಲ್ಲಿ ?

ಈ ಶಾಶ್ವತ ಲಗ್ನಪದ್ಧತಿಯಿಂದ ಪ್ರೇಮದ ಕ್ಷೇತ್ರವು ಆಕುಂಚಿತ ವಾಗುವದರಿಂದ ಜೀವನದ ಸ್ವಾರಸ್ಯವು ಕಡಿಮೆಯಾಗುವದು. ಗಂಡ ಹೆಂಡರೊಳಗಿನ ಪ್ರೇಮದ ಝರಿಯು ಕಾಲಕ್ರಮದಲ್ಲಿ ಬತ್ತಿಹೋಗು ವದರಿಂದ, ಇಬ್ಬರಲ್ಲಿಯೂ ಸಂಸಾರ ವಿಮುಖತೆ ಹೆಚ್ಚುವದು: ಗಂಡಸ್ಸು ಧನ-ಕೀರ್ತಿ ಮೊದಲಾದ ಪ್ರೇಮವ್ಯತಿರಿಕ್ತವಾದ ಗುರಿಯ ಕಡೆಗೆ ಹೊರ

ಡುವನು; ಹೆಂಗಸು ಇತರ ಪ್ರಾಪಂಚಿಕ ವಿಷಯಗಳಲ್ಲಿ ತೊಡಗಲು ಯತ್ನಿಸುವಳು. ಇದರಿಂದ ಮನೆಯಲ್ಲಿಯ ಉತ್ಸಾಹ ಉಲ್ಲಾಸಗಳು ಅಳಿದು ಒಂದು ತರದ ಶಾಂತ- ಗಂಭೀರ- ಉದಾಸೀನ ವಾತಾವರಣವು ತುಂಬುವದು. ಮನೆಯ ಹೊರತು ಬೇರೆ ಕಡೆಗೆ ಉತ್ಸಾಹ ಉಲ್ಲಾಸಗಳನ್ನು ಗಳಿಸಲು ಗಂಡಸಾಗಲಿ ಹೆಂಗಸಾಗಲಿ ಪ್ರಯತ್ನ ಪಟ್ಟಲ್ಲಿ ಕಲಹದಿಂದ ಜೀವನದಲ್ಲಿ ಅಶಾಂತಿಯುಂಟಾಗುವದು. ಇದಕ್ಕೆ ಉದಾಹರಣೆಗಳು ಒಂದೆರಡಲ್ಲ; ವಿವಾಹಿತ ದಂಪತಿಗಳಲ್ಲಿ ಬಹುಭಾಗದವರಲ್ಲಿ ಈ ದೃಶ್ಯವು ಕಂಡುಬರುತ್ತದೆ. ಪ್ರೇಮವು, ಅದನ್ನು ಹತ್ತಿಕ್ಕಿಡುವ ಚಟದ ಮೂಲಕವಾಗಲಿ, ಗೊಡ್ಡು ವೇದಾಂತದ ಉದಾಶೀನತೆಯಿಂದಾಗಲಿ, ಲಗ್ನ ಬಂಧನದ ದೆಸೆಯಿಂದಲಾಗಲಿ ಬತ್ತಿ ಹೋದರೆ, ಅದರ ಸ್ಥಳವನ್ನು ಇತರ ಯಾವದೊಂದು ವಿಕಾರವು ವ್ಯಾಪಿಸಿಕೊಳ್ಳದೆ ಬಿಡುವದೆಂತು? ಸಹಕಾರ ಮಮತೆಗಳ ಬದಲು ಅಧಿಕಾರ ಸ್ವಾರ್ಥಗಳು ನೆಲೆಸಿದಲ್ಲಿ ಅಶಾಂತೆಯಲ್ಲದೆ ಮತ್ತೇನಿದ್ದೀತು?



# ಉಪ ಸಂಹಾರ



ಈ ವರೆಗಿನ ಎಲ್ಲ ವಿವರಗಳಿಂದ ಕಂಡು ಬರುವದೇನಂದರೆ, ಪ್ರಚಲಿತ ಲೈಂಗಿಕ ನೀತಿನಿಯಮಗಳೆಲ್ಲ ಅಸ್ವಾಭಾವಿಕವಾದವಿದ್ದು, ಅವುಗಳಲ್ಲಿ ಬದಲಾವಣೆಯಾಗುವದು ಅತ್ಯವಶ್ಯವಾಗಿರುವದು. ಈ ಲೈಂಗಿಕ ನೀತಿ ನಿಯಮಗಳಿಗೆ ಜನನೇಂದ್ರಿಯ ರಚನಾಶಾಸ್ತ್ರ ಹಾಗೂ ಪ್ರಜನನ ಶಾಸ್ತ್ರ ಇವು ತಳಹದಿಯಾಗಿರಬೇಕು; ಸ್ತ್ರೀ ಪುರುಷರಿಗೆ ಸಮಾನವಾಗಿ ಅನ್ವಯಿಸಬೇಕು. ಲಗ್ನವಾಗಿ ಕೇವಲ ಪ್ರಾಮಾಣಿಕತನದಿಂದ ನಡೆದು ಕೊಂಡು ಬಂದಷ್ಟಕ್ಕೆ ಸ್ತ್ರೀಪುರುಷರ ಕರ್ತವ್ಯವಾಗಲಿಲ್ಲ; ಇದರ ಹೊರತು ಅನೇಕ ಕರ್ತವ್ಯಗಳಿರುವವು. ಮೊದಲನೆಯ ಕರ್ತವ್ಯವೆಂದರೆ ಸಂಯಮನದಿಂದ ಮಿತಸಂತತಿಯನ್ನುಂಟುಮಾಡುವದು; ಇದರ ಹೊರತು ನಾವು ನಿಜವಾದ ಯಾವ ಪ್ರಗತಿಯನ್ನೂ ಮಾಡಲಾರೆವು. ಎರಡನೆಯ ಕರ್ತವ್ಯವೆಂದರೆ ನಾವು ಜನ್ಮಕೊಟ್ಟ ಮಕ್ಕಳ ಶಿಕ್ಷಣದ ಮತ್ತು ಪೋಷಣೆಯ ವ್ಯವಸ್ಥೆಮಾಡುವದು. ಮೊದಲನೆಯ ಕರ್ತವ್ಯಪಾಲನೆಯನ್ನು ಸರಿಯಾಗಿ ಮಾಡಿದರೆ ಎರಡನೆಯ ಕರ್ತವ್ಯವು ಸುಗಮವಾಗುವದು. ಮಕ್ಕಳ ಪೋಷಣೆಯ ಮತ್ತು ಮೂಲ ಶಿಕ್ಷಣದ ಹೊಣೆಯನ್ನು ನಿಸರ್ಗವು ತಾಯಿಗೆ ಒಪ್ಪಿಸಿರುವದರಿಂದ, ಅವಳು ಆದರ್ಶಮಾತೆಯಾಗಿರಬೇಕು; ಅವಳ ದರ್ಜೆಯು ಹೆಚ್ಚಬೇಕು; ಅವಳ ಪಾರತಂತ್ರ್ಯವು ಹೋಗಬೇಕು; ಅವಳು ಬಲ್ಲವಳಾಗಬೇಕು; ಅವಳ ಕಾರ್ಯಕ್ಷೇತ್ರವು ವಿಶಾಲವಾಗಬೇಕು.

ನಮ್ಮ ಸಮಾಜರಚನೆಯಲ್ಲಿ ಇನ್ನೊಂದು ಮಹತ್ವದ ಬದಲಾವಣೆಯಾಗಬೇಕು; ಬಡವರಿಗೂ ಸಿರಿವಂತರಿಗೂ ಗಂಡಸಿಗೂ ಹೆಂಗಸಿಗೂ ಪ್ರತಿಯೊಬ್ಬರಿಗೂ ಲೈಂಗಿಕಸೌಖ್ಯವು ದೊರೆಯುವಂತೆ ಸಮಾಜದಲ್ಲಿ ಏರ್ಪಾ

ಲಾಗಬೇಕು; ಎಂದರೆ ಅದು ಶಿಷ್ಟಸಮ್ಮತವಾಗಬೇಕು. ಪ್ರೇಮಾಭಾವ ದಿಂದ ಬಳಲುವ, ಕಾಮತೃಪ್ತಿಗಾಸ್ಪದವಿಲ್ಲದೆ ಕೊರಗುವ, ಕೆಡುತ್ತಿರುವ ನಿರ್ಭಾಗ್ಯರ ಕಡೆಗೆ ಗಮನಕೊಡಬೇಕು. ಒಂದೆರಡು ಸುದೈವಿ ದಂಪತ್ತು ಗಳು ಮಾತ್ರ ಅಜೀರ್ಣವಾಗುವಂತೆ ಪ್ರೇಮವನ್ನು ಅನುಭವಿಸುತ್ತಿದ್ದು ಮಿಕ್ಕುಳಿದ ಜನಸಾಮಾನ್ಯವೆಲ್ಲ ಅದರ ಅಭಾವದಿಂದ ಬಳಲುವ ವಿಷಮ ತೆಯು ಹೋಗಬೇಕು. ಎಂದರೆ ಶಾಂತಿಸಮಾಧಾನಗಳು ನೆಲೆಗೊಳ್ಳುವ ವಲ್ಲದೆ, ಲೈಂಗಿಕ ಅನಾಚಾರಗಳೂ ವೇಶ್ಯಾವೃತ್ತಿಯೂ ಇಲ್ಲಿಂದ ತಳ ಕಿತ್ತುವವು.

ಲೈಂಗಿಕ ಸುಖದ ಶಿಷ್ಟಸಮ್ಮತ ರಾಜಮಾರ್ಗವು ಲಗ್ನವೊಂದೇ ಎಂಬ ಕಲ್ಪನೆಯು ಸಮಾಜದಲ್ಲಿ ರೂಢವಾಗಿರುವವರೆಗೆ ಸಾತ್ವಿಕವೂ ಪವಿ ತ್ರವೂ ಗೌರವಯುತವೂ ಆದ ಸ್ವತಂತ್ರ ಲೈಂಗಿಕ ನೀತಿಶಾಸ್ತ್ರವು ಹುಟ್ಟು ವದು ಶಕ್ಯವಿಲ್ಲ. ಕೆಲವೊಂದು ಜನ ಹೆಣ್ಣುಮಕ್ಕಳು ಹಾಗೂ ತೀರ ಸ್ವಲ್ಪ ಗಂಡಸರ ಹೊರತು ಈ ಲಗ್ನ ಬಂಧನವನ್ನುಪಾಲಿಸುವದಿಲ್ಲವೆಂಬುದು ನಿದ ರ್ಶನಕ್ಕೆ ಬರುವದು; ನೂರಕ್ಕೆ ೯೯ ರಷ್ಟು ಜನರು ಈ ಬಂಧನಗಳನ್ನು ಮುರಿಯುವವರೇ. ಏಕೆಂದರೆ, ಲಗ್ನಪದ್ಧತಿಯು ಪ್ರಕೃತಿ ಧರ್ಮಕ್ಕೆ ವಿಸಂ ಗತವಾಗಿದ್ದುದರಿಂದ ಅದು ಪಾಲಿಸಲ್ಪಡುವದು ಅಶಕ್ಯವೇ ಆಗಿದೆ. ಪಾಲಿಸ ದಿರುವವರನ್ನು ಕಠೋರವಾಗಿ ಶಿಕ್ಷಿಸಿದರೂ ಕೂಡ— ಅವರನ್ನು ಸುಟ್ಟರೂ ಕೂಡ— ಪಾಲಿಸುವವರು ಸಿಕ್ಕುವದು ಅಸಂಭವ. ಕೆಲವೊಂದು ಅಪ ವಾದಗಳನ್ನು ಬಿಟ್ಟರೆ ಸರ್ವಸಾಮಾನ್ಯವಾಗಿ ಪ್ರೇಮದಲ್ಲಿ ಅದಲು ಬದ ಲಿಗೆ ಆಸ್ಪದವಿರುವದು ಸಮಾಜಕ್ಕೆ ಹಿತಕರವೆಂದು ಕಂಡುಬರುತ್ತಿರುವದ ರಿಂದ ಹಾಗೆ ಸಮಾಜ ರಚನೆಯನ್ನು ಮಾರ್ಪಡಿಸುವದು ಅತ್ಯಗತ್ಯವಾ ದದ್ದು. ಸಾರಾಂಶವೇನೆಂದರೆ, ಸ್ತ್ರೀ ಪುರುಷರೊಳಗೆ ಪರಸ್ಪರ ಅನು ರಾಗವಿದ್ದಲ್ಲಿ ಶಾಶ್ವತ ಲಗ್ನ ಬಂಧನವನ್ನು ಹಾಕದೆಯೂ ಪ್ರೇಮಿಗಳಿಗೆ ಲೈಂಗಿಕ ಸೌಖ್ಯವನ್ನು ಅನುಭವಿಸಲು ನೀತಿಯು ಆತಂಕವಾಗಬಾರದು.

ಭಾವೀ ಸಮಾಜ ಹಿತದ ಭಾರವು ಮುಖ್ಯವಾಗಿ ತರುಣರ ಮೇಲಿ ರುವದು. ಸಮಾಜವನ್ನು ಈ ದುಃಖದಿಂದ ಬಿಡುಗಡೆ ಮಾಡಲು ಅವರು ಸಾಹಸಯುಕ್ತವಾದ ಪ್ರಯತ್ನವನ್ನು ಮಾಡಬೇಕು. ಪ್ರೇಮ ಸಂಬಂಧವು

ದುಡ್ಡನ್ನಾಶ್ರಯಿಸುವದು ತುಂಬಾ ಹೇಯವಾದದ್ದು. ವ್ಯಾಪಾರಿ ಪ್ರೇಮ ಸಂಬಂಧದ ವಿರುದ್ಧವಾಗಿ ತರುಣ ತರುಣಿಯರು ಹೋರಾಡಬೇಕಾಗಿದೆ. ಮೊದಲು ದಾರಿದ್ರ್ಯವನ್ನೂ ಸ್ತ್ರೀ ಪಾರತಂತ್ರ್ಯವನ್ನೂ ಹೋಗಲಾಡಿಸಬೇಕು; ಬಳಿಕ ಲೈಂಗಿಕ ಸ್ವಾತಂತ್ರ್ಯಕ್ಕೆ ಸಮಾಜದಿಂದ ಪುರಸ್ಕಾರವನ್ನು ದೊರಕಿಸಬೇಕು. ಮಾನವ ಹಿತಕ್ಕೆ ಅತ್ಯಗತ್ಯದ್ದಾದ ಲಗ್ನಬಾಹ್ಯ ನಿರ್ಬಂಧನಾತ್ಮಕ ಪ್ರೇಮವು ಶಿಷ್ಟ ಸಮ್ಮತ ವ್ಯವಹಾರವೆಂದು ಗಣ್ಯವಾಗುವಂತೆ ಮಾಡಬೇಕು. ಸದ್ಯಕ್ಕೆ ಇದೊಂದು ಶೇಖಮಹಮ್ಮದನ ವಿಚಾರವೆಂದೆನಿಸುವದು ಸಹಜವಾದದ್ದು. ಆದರೆ ಪರಸ್ಪರ ವಿಶ್ವಾಸದ ವರ್ತನೆಯಿಂದಲೂ ದಾರಿದ್ರ್ಯ-ವೇಶ್ಯಾವೃತ್ತಿಗಳ ಉಚ್ಚಾಟನೆ ಮಾಡುವದರಿಂದಲೂ ನಿಜವಾದ ಲೈಂಗಿಕ ಜ್ಞಾನವನ್ನು ಪ್ರಚುರಗೊಳಿಸುವದರಿಂದಲೂ ಈ ಕಾರ್ಯ ಶಕ್ಯವಾಗುವಂತಿದೆ. ಈ ಕಾರ್ಯವು ತರುಣ ತರುಣಿಯರಿಂದಲ್ಲದೆ ಇತರರಿಂದ ವಿಶೇಷವಾಗಿ ಆಗಲರಿಯದು, ಆಗಲಾರದು

ಕಾಮದಹನವು ನಮ್ಮ ದಹನವಾದಾಗಲೇ ಆಗುವದು, ಅಂಗವಿರುವವರೆಗೂ ಅಂಗಜನಿರುವವನೇ. ಅಂಗವನ್ನು ಸುಡದೇ ಅಂಗಾಂಗಗಳನ್ನೆಲ್ಲಾ ವ್ಯಾಪಿಸಿರುವ ಅನಂಗನನ್ನು ಸುಡುತ್ತೇನೆಂಬುದು ಒಂದು ಮಹಾಭ್ರಾಂತಿ. ಈ ಭ್ರಾಂತಿಯಿಂದುಂಟಾಗಿರುವ ಈ ಸಕಲ ಅಸ್ವಾಸ್ಥ್ಯಗಳಿಂದಲೂ ಮುಕ್ತವಾಗಿ ಸಮಾಜವು ಸುಖಿಯಾಗುವದೆಂದು?

**ಸರ್ವೇ ಜನಾಃ ಸುಖಿನೋ ಭವಂತು.**

**ಓಂ ಶಾಂತಿಃ ಶಾಂತಿಃ ಶಾಂತಿಃ**

